# ಆತ್ಮಾನುಭವ ದರ್ಶಿನಿ

( ಮೂಲ ಮರಾಠಿ ಗ್ರಂಥ "ಆತ್ಮಾನುಭವ" ದ

ಕನ್ನಡ ಭಾವಾನುವಾದ ಮತ್ತು ವಿವರಣೆ )

ಮೂಲ ಮರಾಠಿ ಗ್ರಂಥ, **"ಆತ್ಮಾನುಭವ"** ದ ಕರ್ತೃ

**ಶ್ರೀಮತ್ ಪರಮಹಂಸ ಶ್ರೀ ಪದ್ಮನಾಭ ತೀರ್ಥಸ್ವಾಮಿ ಮಹಾರಾಜರು**

***

**ಕನ್ನಡಕ್ಕೆ ಭಾವಾನುವಾದ ಮತ್ತು ವಿವರಣೆ:**

ಡಾ.ಬಿ.ಎನ್.ಕೃಷ್ಣಮೂರ್ತಿ

ನಿವೃತ್ತ ಪ್ರಾಂಶುಪಾಲರು, ಸರ್ಕಾರೀ ಕಲಾ ಮತ್ತು ವಿಜ್ಞಾನ ವಿದ್ಯಾನಿಲಯ,

ಕಾರವಾರ - **581304**



## ಪ್ರಥಮೋಧ್ಯಾಯಃ

## (ಕನ್ನಡ ಭಾವಾನುವಾದ ಮತ್ತು ವಿವರಣೆ)

## ( 'ಮಂಗಳ ಪ್ರತೀಜ್ಞಾ' ನಿರೂಪಣೆ )

## ( ಓವಿ ಸಂ.1- 87 )

**ಓವೀ.1** : ಶ್ರೀ ಶ್ರೀ ಪದ್ಮನಾಭತೀರ್ಥ ಮಹಾಸ್ವಾಮಿಗಳು ತಮ್ಮ ಸದ್ಗುರುಗಳಿಗೆ ಮೊದಲು ವಂದಿಸಿ ತಾವು ಸ್ವತಃ ಅನುಭವಿಸಿದ ಆತ್ಮಾನುಭವವನ್ನು ತಮ್ಮ ಜ್ಞಾನಾಧಿಕಾರಿಗಳಾಗಿರುವ ಯೋಗ್ಯ ಶಿಷ್ಯವರ್ಗಕ್ಕಾಗಿ ಹೇಳುತ್ತಾರೆ. ಈ ಬ್ರಹ್ಮ ವಿದ್ಯೆಯಲ್ಲಿ ಸ್ವತಃ ವಿದ್ಯಾದೇವತೆಯಾದ ಸರಸ್ವತಿಯು ನೆಲೆಸುವಳು; ಅವಳಿಗೆ ಜಯಕಾರವಿರಲಿ ಎಂದು ತಿಳಿಸಿದ್ದಾರೆ.

**ವಿವರಣೆ :** ಶ್ರೀ ಶ್ರೀ ಪದ್ಮನಾಭತೀರ್ಥ ಮಹಾಸ್ವಾಮಿಗಳು, ಕಾರವಾರದ ಶ್ರೀ ಬಾಡ ಮಠದ ಸಂಸ್ಥಾಪಕರು. ಅವರು ತಮ್ಮ ಆಧ್ಯಾತ್ಮ ಗ್ರಂಥವಾದ 'ಆತ್ಮಾನುಭವ' ದ ರಚನೆಗೆ ಮೊದಲು ತಮ್ಮ ಗುರುಗಳಿಗೆ ವಂದಿಸುತ್ತಾರೆ. ತಮ್ಮ ಗುರುಗಳು ಶ್ರೀ ಸ್ವಯಂಪ್ರಕಾಶ ಯತಿಗಳೆಂದು ಅವರೇ ಅನೇಕ ಕಡೆಗಳಲ್ಲಿ ಹೇಳಿದ್ದರೂ ಇದರ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಈ ಗ್ರಂಥದ ಪ್ರತಿ ಅಧ್ಯಾಯದಲ್ಲೂ ಗುರುಗಳ ಬಗ್ಗೆ ಬಹಳಷ್ಟು ಹೇಳಿದರೂ, ಈ ಅಧ್ಯಾಯವು ಮಾತ್ರ ಮುಖ್ಯವಾಗಿ ತಮ್ಮ ಗುರುಗಳ ಸ್ಮರಣೆಗೇ ಮೀಸಲಿಡಲಾಗಿದೆ. ಆದರೂ ಶ್ರೀಗಳು ತಮ್ಮ ಗುರುಗಳ ಚಾರಿತ್ರಿಕ ಸಂಗತಿಗಳ ಬಗ್ಗೆ ಏನೊಂದನ್ನೂ ಹೇಳದೇ ಅವರನ್ನು ನಿಮಿತ್ತ ಮಾಡಿಕೊಂಡು ಅತ್ಯಂತ ಕ್ಲಿಷ್ಟವಾದ ತಾತ್ವಿಕ ವಿಚಾರಗಳನ್ನೇ ಚರ್ಚಿಸಿದ್ದಾರೆ. ಅವರ ಅನೇಕ ಗ್ರಂಥಗಳಂತೆ 'ಆತ್ಮಾನುಭವ' ವೆಂಬ ಈ ಗ್ರಂಥವು ಕೂಡ ಹಳೇ ಮರಾಠಿಯಲ್ಲಿ ಅತ್ಯಂತ ಸರಳ ಶೈಲಿಯಲ್ಲಿ 'ಓವೀ' ಎಂದು ಕರೆಯಲ್ಪಡುವ ಪದ್ಯ ಶೈಲಿಯಲ್ಲೇ ಬರೆಯಲ್ಪಟ್ಟಿದೆ. ತಾವು ಸುಮಾರು 43 ಗ್ರಂಥಗಳನ್ನು ರಚನೆ ಮಾಡಿದ್ದು ಅವುಗಳಲ್ಲಿ ಅತ್ಯಂತ ಪ್ರಮುಖವೆಂದು ಈ ಗ್ರಂಥವು ಪರಿಗಣಿಸಲ್ಪಟ್ಟಿದ್ದು, ಸ್ವತಃ ತಾವೇ ಅದನ್ನು 'ಗ್ರಂಥರಾಜ' ಎಂದೂ ಕರೆದಿದ್ದಾರೆ. ಅವರ ಗ್ರಂಥಗಳು ಮುಖ್ಯವಾಗಿ ಮರಾಠಿಯಲ್ಲೇ ಬರೆಯಲ್ಪಟ್ಟಿದ್ದು ಕೆಲವೇ ಗ್ರಂಥಗಳು ಕನ್ನಡದಲ್ಲೂ ಹಾಗು ಸಂಸ್ಕೃತದಲ್ಲೂ ರಚಿಸಲ್ಪಟ್ಟಿವೆ.

ಶ್ರೀಗಳು ಸ್ವತಃ ಬ್ರಹ್ಮಜ್ಞಾನಿಗಳಾಗಿದ್ದು ತಾವು, ಅಮೃತ ಸಮಾನವಾದ ಯಾವ ಬ್ರಹ್ಮಾನುಭವವನ್ನು ಪಡೆದರೋ ಅದನ್ನೇ ತಮ್ಮ ಯೋಗ್ಯ ಶಿಷ್ಯವರ್ಗಕ್ಕೂ ಕೊಡುವ ನಿಮಿತ್ತ ಈ ಗ್ರಂಥರಾಜನನ್ನು ಇಡೀ ಜಗತ್ತಿಗೇ ಉಪದೇಶಿಸಿದ್ದಾರೆ. ಎಲ್ಲ ವಿದ್ಯೆಗಳಿಗಿಂತ ಅಧ್ಯಾತ್ಮ ವಿದ್ಯೆಯು ಶ್ರೇಷ್ಠವಾಗಿದ್ದು ( ... ... ಅಧ್ಯಾತ್ಮ ವಿದ್ಯಾ

ವಿದ್ಯಾನಾಂ ವಾದಃ ಪ್ರವದತಾಮಹಮ್ – ಭ.ಗೀತಾ.10-32 ), ಇದೇ ವಿದ್ಯೆಯನ್ನು ಒಳಗೊಂಡ ಈ ಗ್ರಂಥವು ಗುರು-ಶಿಷ್ಯ ಸಂವಾದದ ಮೂಲಕ ಬರೆಯಲ್ಪಟ್ಟಿದೆ. ಎಲ್ಲ ವಿದ್ಯೆಗಳಿಗೆ ಅಧಿಷ್ಠಾನ ದೇವತೆಯಾದ ಸರಸ್ವತಿಯು ಈ ಗ್ರಂಥದಲ್ಲಿ ನೆಲೆಸಿರುತ್ತಾಳೆ ಎಂಬ ಆತ್ಮ ವಿಶ್ವಾಸವನ್ನು ಶ್ರೀಗಳು ವ್ಯಕ್ತಪಡಿಸಿದ್ದಾರೆ. ಇಂತಹ ಸರಸ್ವತಿಗೆ ಜಯಕಾರವನ್ನು ಶ್ರೀಗಳು ಮಾಡಿದ್ದಾರೆ.

ಓವೀ.2 : ಸದ್ರೂಪವಾಗಿರುವ ಗುರುವು ಕಾಲಾತೀತವಾಗಿರುವನು, ಅಂದರೆ ಅವಿನಾಶಿಯು. 'ಗುರು' ಎಂದರೆ ದೊಡ್ಡದು. ಇಲ್ಲಿ ದೊಡ್ಡದು ಅಂದರೆ ನಿರಪೇಕ್ಷವಾಗಿರುವುದು. ಅಂತಹ ಶ್ರೇಷ್ಠ ಗುರುವಿಗೆ ಜೈಕಾರವಿರಲಿ.

ವಿವರಣೆ : ಈ ಓವೀಯಲ್ಲಿ 'ಗುರು' ಪದದ ಅರ್ಥವನ್ನು ತಿಳಿಸಿದ್ದಾರೆ. 'ಸತ್' ಸ್ವರೂಪವನ್ನೂ ಮತ್ತು ಗುರುತ್ವವನ್ನೂ ಯಾರು ಹೊಂದಿದ್ದಾರೋ ಅವರೇ ಸದ್ಗುರುವಾಗಿದ್ದಾರೆ. 'ಸತ್' ಎಂದರೆ ಯಾವಾಗಲೂ ಇರುವಂತಹುದು. ವಿಕಾರವಾಗಿ ನಾಶವಾಗಿ ಹೋಗುವಂತಹುದೆಲ್ಲವೂ ಕಾಲದ ಹೊಡೆತಕ್ಕೆ ಸಿಕ್ಕಿರುವುದೇ ಆಗಿರುತ್ತದೆ. ಆದರೆ ಇದಕ್ಕೆ ಅಪವಾದವೆಂದರೆ 'ಸತ್' ಸ್ವರೂಪವಾಗಿದೆ. ಏಕೆಂದರೆ ಅದಕ್ಕೆ ನಾಶವೇ ಇರುವುದಿಲ್ಲ. ಆದುದರಿಂದ ಅದು ಕಾಲಾತೀತವಾಗಿರುತ್ತದೆ. 'ಗುರು' ಎಂದರೆ ದೊಡ್ಡದು ಎನ್ನುವ ಅರ್ಥವಿದೆ. ಗ್ರಹಗಳಿಗೆಲ್ಲ ದೊಡ್ಡದಾಗಿರುವ ಗ್ರಹಕ್ಕೆ 'ಗುರು' ಗ್ರಹವೆನ್ನುತ್ತೇವೆ. ಆದರೆ 'ಸದ್ ಗುರು' ಎನ್ನುವಲ್ಲಿ 'ಗುರು' ವು ಪ್ರಮಾಣದಲ್ಲಿ ದೊಡ್ಡದಲ್ಲ. ಅದರ ದೊಡ್ಡತನವು ನಿರಪೇಕ್ಷವಾಗಿರುವ ಬಗ್ಗೆ, ಅಂದರೆ ಸ್ವತಂತ್ರವಾದ ಅಸ್ತಿತ್ವವನ್ನು ಹೊಂದಿರುವ ಬಗ್ಗೆ ಆಗಿರುತ್ತದೆ. ಈ ಅರ್ಥದಲ್ಲಿ ಕಾಲವೂ ದೊಡ್ಡದಲ್ಲ. ಏಕೆಂದರೆ ಕಾಲವು ನಮ್ಮ ಅವಸ್ಥೆಯ ಅಪೇಕ್ಷೆಯ ಮೇರೆಗೆ ಮಾತ್ರ ಅಸ್ತಿತ್ವವನ್ನು ಹೊಂದಿರುತ್ತದೆ. ಅಂದರೆ ನಮ್ಮ ಜಾಗ್ರತಾವಸ್ಥೆಯು ಬದಲಾವಣೆಯಾಗಿ ಸ್ವಪ್ನ ಬಂದಾಗ ಆ ಕಾಲವೂ ನಾಶವಾಗಿ ಬೇರೆ ಕಾಲವು ಬರುತ್ತದೆ. ಈ ಅರ್ಥದಲ್ಲಿ ಸದ್ಗುರುವು ನಿರಪೇಕ್ಷವಾಗಿ ಅವಿನಾಶಿಯಾಗಿದ್ದಾನೆ.

ಓವೀ.3 : ಕಣ್ಣಿಗೆ ಕಾಣುವ ಹಾಗು ತೋರುವುದೆಲ್ಲವೂ ನಾಶವಾಗಿ ಹೋಗುತ್ತದೆ. ಹೀಗೆ ಎಲ್ಲದರ ನಾಶವನ್ನು ನೋಡುವವನಿಗೆ ಮಾತ್ರ ನಾಶವಿರುವುದಿಲ್ಲ.

ವಿವರಣೆ : ಈ ಓವೀಯಲ್ಲಿ ನಿರಪೇಕ್ಷ ಹಾಗು ಅವಿನಾಶಿಯಾದ ಸದ್ಗುರುವನ್ನು ಗುರುತಿಸುವ ಮೂಲಕ ಜ್ಞಾನ ಸ್ವರೂಪನೂ ಕೂಡ ಇದ್ದಾನೆ ಎಂದು ತೋರಿಸಲಾಗಿದೆ. ಕಣ್ಣಿಗೆ ಕಾಣುವ ಸಕಲ ಪ್ರಪಂಚವು ವಿಕಾರವಾಗಿ ನಾಶವಾಗಿ ಹೋಗುವಂತಹುದಾಗಿದೆ. ಇಲ್ಲಿ 'ಕಣ್ಣು' ಕೇವಲ ಒಂದು ಉಪಲಕ್ಷಣವಾಗಿ ಉಪಯೋಗಿಸಲ್ಪಟ್ಟಿದೆ. ಅಂದರೆ ಪ್ರಧಾನ ಇಂದ್ರಿಯವಾದ ಕಣ್ಣನ್ನು ಉದಾಹರಣೆಯಾಗಿ ತೆಗೆದುಕೊಂಡರೂ ಕೂಡ ಬೇರೆ ಇಂದ್ರಿಯಗಳಿಂದ ಹಾಗೂ ಮನೋ-ಬುದ್ಧಿಗಳಿಗೆ ತೋರುವ ಪ್ರತಿಯೊಂದು

ವಿಷಯವೂ ಕೂಡ ಕಾಲರಾಯನ ಹೊಡೆತಕ್ಕೆ ಸಿಕ್ಕು ನಾಶವಾಗುತ್ತಲಿದೆ. ಇಲ್ಲಿ ಯಾವ ಇಂದ್ರಿಯಾದಿ ಕರಣಗಳ ಮೂಲಕ ತಿಳಿಯಲ್ಪಡುವ ಜಗತ್ತು ನಾಶವಾಗುವುದೋ ಆ ಕರಣಗಳೂ ಸಹ ಜಗತ್ತಿನ ಅಂಗಗಳಾಗಿದ್ದು ಅವೂ ಕೂಡ ಕಾಲನ ಹೊಡೆತಕ್ಕೆ ಸಿಕ್ಕು ನಾಶವಾಗುತ್ತವೆ. ಹೀಗೆ ಸಕಲ ವಿಷಯವೂ ನಾಶವಾಗುತ್ತವೆ ಎಂದು ಯಾರಿಗೆ ತಿಳಿಯುವುದೋ ಅವರೇ ಅಂದರೆ ಆ 'ವಿಷಯಿ' ಯೇ ಸದ್ಗುರುವಾಗಿದ್ದಾನೆ. ಇಲ್ಲಿ 'ವಿಷಯಿ' ಗೆ ಉಂಟಾಗುವ ತಿಳುವಳಿಕೆ ಅಥವಾ ಜ್ಞಾನವು ಸದ್ಗುರುವಿನ ಇನ್ನೊಂದು ಸ್ವರೂಪಲಕ್ಷಣವಾಗಿರುತ್ತದೆ. ಅಂದರೆ ಸದ್ಗುರುವು ಚೈತನ್ಯ ಸ್ವರೂಪದ ಆತ್ಮನೇ ಆಗಿದ್ದು, ಅದು ನಿರಪೇಕ್ಷ ಸತ್-ಸ್ವರೂಪವಾಗಿರುತ್ತದೆ. ಎಲ್ಲದರ ನಾಶವನ್ನು ನೋಡುವ ಆತ್ಮನಿಗೆ ನಾಶವಿಲ್ಲ. ಏಕೆಂದರೆ ಆತ್ಮನು ಮೂರು ಅವಸ್ಥೆಗಳಿಗೆ ಕಟ್ಟುಬಿದ್ದ ಜಗತ್ತನ್ನು ನೋಡುವ ಸಾಕ್ಷಿಯಾಗಿರುತ್ತಾನೆ.

ಓವೀ.4 : ಈ ಜ್ಞಾನವನ್ನು ( ಚೈತನ್ಯವನ್ನು ) ಕೆಲವು ಮೂರ್ಖ ಜನರು ದೃಶ್ಯದ ( ಜಡದ ) ಶಕ್ತಿಯೇ ಆಗಿರುತ್ತದೆ ಎಂದು ತಿಳಿಯುವರು. ಆದರೆ ಯಾವುದೇ ಜಡ ಶಕ್ತಿಯೂ ತನ್ನ ಅಧಿಷ್ಠಾನವನ್ನು ವಿಷಯಕರಿಸುವುದಿಲ್ಲ (ವಿಷಯವನ್ನಾಗಿ ಮಾಡುವುದಿಲ್ಲ ).

ವಿವರಣೆ : ಕೆಲವರು ಹಿಂದಿನ ಓವೀಯಲ್ಲಿ ತಿಳಿಸಿದ ಚೈತನ್ಯವನ್ನು ಜಡದ ಶಕ್ತಿಯೆಂದು ತಿಳಿಯಬಹುದಾದ್ದರಿಂದ ಅದನ್ನು ಆತ್ಮನೆಂದು ತಿಳಿಯಲು ಸಮ್ಮತಿಸುವುದಿಲ್ಲ. ಅವರ ಅಭಿಪ್ರಾಯವನ್ನು ವಿವರವಾಗಿ ಖಂಡಿಸಲು ಮುಂದಿನ ಕೆಲವು ಓವೀಗಳು ಇರುತ್ತವೆ. ಈ ಓವೀಯಲ್ಲಿ ಯಾವುದೇ ಜಡದ ಶಕ್ತಿಯು, ಅದರ ಅಧಿಷ್ಠಾನವನ್ನು ( ಜಡವನ್ನು) ವಿಷಯಕರಿಸಲು ಸಾಧ್ಯವಿಲ್ಲ ಎಂಬುದನ್ನು ತಿಳಿಸಿ ಮುಂದಿನ ಅನೇಕ ಓವೀಗಳಲ್ಲಿ ಉದಾಹರಣೆ ಸಹಿತ ಅದನ್ನು ಸಿದ್ಧಮಾಡಲಾಗಿದೆ. ಜಡವು ತನ್ನನ್ನು ತಾನು 'ಇದ್ದೇನೆ' ಎಂದು ತಿಳಿಯದಿರುವುದರಿಂದ, ಚೈತನ್ಯ ಸ್ವರೂಪನಾದ ಆತ್ಮನು ಜಡವನ್ನು ತಿಳಿದ ಮೇಲೆಯೇ, ಜಡದ ಅಸ್ತಿತ್ವವು ಸಿದ್ಧವಾಗುತ್ತದೆ. ಆದುದರಿಂದ ಒಂದುವೇಳೆ ಜಡದ ಶಕ್ತಿಯೇ ಚೈತನ್ಯವಾಗಿದ್ದರೆ ಆಗ ಅದರಿಂದ ಆ ಜಡವು ತಿಳಿಯಲ್ಪಟ್ಟು ಅದರ ಅಸ್ತಿತ್ವವು ಸಿದ್ಧವಾಗುತ್ತಿತ್ತು ಮತ್ತು ಆತ್ಮನ ಅವಶ್ಯಕತೆ ಇರುತ್ತಿರಲಿಲ್ಲ. ಆದರೆ ಜಡದ ಶಕ್ತಿಯು ಚೈತನ್ಯವಾಗಲು ಸಾಧ್ಯವಿಲ್ಲ. ಏಕೆಂದರೆ ಆ ಶಕ್ತಿಯು ತನ್ನ ಅಧಿಷ್ಠಾನವನ್ನು ವಿಷಯ ಮಾಡಲಾರದು ಎಂದು ತೋರಿಸಲಾಗಿದೆ.

ಓವೀ.5 : ಅಗ್ನಿಯ ಸುಡುವ ಶಕ್ತಿಯು ಅಗ್ನಿಯನ್ನು ದಹಿಸಲಾರದು. ಹಾಗೆಯೇ ನೀರಿನ ಶೀತಲತ್ವವು ನೀರನ್ನು ತಂಪು ಮಾಡಲಾರದು.

ವಿವರಣೆ : ಜಡ ಶಕ್ತಿಯು ತನ್ನ ಅಧಿಷ್ಠಾನವನ್ನು ಎಂದೂ ವಿಷಯಕರಿಸುವುದಿಲ್ಲ ಎಂದು ಹಿಂದಿನ ಓವೀಯಲ್ಲಿ ತಿಳಿಸಲಾಗಿದೆ. ಈ ಅಭಿಪ್ರಾಯವನ್ನು ಪುಷ್ಟೀಕರಿಸಲು ಈ ಓವೀಯಲ್ಲಿ ಎರಡು ಉದಾಹರಣೆಗಳನ್ನು

ಕೊಡಲಾಗಿದೆ. ಅಗ್ನಿಯ ಶಕ್ತಿಯು ಇನ್ನೊಂದು ವಸ್ತುವನ್ನು ಸುಡುವುದರಲ್ಲಿ ( ದಾಹಕತ್ವ ) ಇರುತ್ತದೆ. ಅಗ್ನಿಯು ಸಕಲವನ್ನು ಸುಟ್ಟು ನಾಶಮಾಡಿದರೂ ಕೂಡ ಅದು ತನ್ನನ್ನು ತಾನು ಸುಟ್ಟು ನಾಶ ಮಾಡಿಕೊಳ್ಳಲಾರದು. ಹಾಗೆಯೇ ನೀರಿನ ಮುಖ್ಯ ಸ್ವರೂಪಲಕ್ಷಣವೆಂದರೆ ಇತರರು ಮುಟ್ಟಿದಾಗ ಅದು ತಂಪನ್ನು ಅವರಿಗೆ ಕೊಡುತ್ತದೆ. ಆದರೆ ನೀರಿನ ತಂಪಿನಿಂದ ನೀರಿಗೆ ಏನೂ ಬಾಧಕವಿಲ್ಲ. ಅಂದರೆ ಅದಕ್ಕೆ ಮನುಷ್ಯರಿಗೆ ಆಗುವಂತೆ ಥಂಡಿ-ನೆಗಡಿ ಆಗುವುದಿಲ್ಲ. ಮುಂದಿನ ಓವೀಗಳಲ್ಲೂ ಇನ್ನೂ ಕೆಲವು ಉದಾಹರಣೆಗಳನ್ನು ಕೊಡಲಾಗಿದೆ.

**ಓವೀ.6 :** ಕಣ್ಣುಗಳಿಗೆ ಪದಾರ್ಥಗಳ ರೂಪವನ್ನು ನೋಡುವ ಶಕ್ತಿ ಉಂಟು. ಆದರೆ ಆ ಶಕ್ತಿಯು ಕಣ್ಣುಗಳನ್ನು ನೋಡಲು ಸಾಧ್ಯವಿಲ್ಲ. ಹಾಗೆಯೇ ಸರ್ಪದ ವಿಷವು ಸರ್ಪವನ್ನು ಕೊಲ್ಲಲಾರದು.

**ವಿವರಣೆ :** ಸಕಲ ಇಂದ್ರಿಯಗಳಲ್ಲಿ ಪ್ರಧಾನವಾದ ನೇತ್ರೇಂದ್ರಿಯವು ಬಾಹ್ಯ ಜಗತ್ತನ್ನು ನೋಡುವುದರ ಮೂಲಕ ಅದನ್ನು ಅರಿತುಕೊಳ್ಳಬಲ್ಲದು. ಆದರೆ ನೋಡುವ ಈ ಶಕ್ತಿಯು ಸ್ವತಃ ಈ ಶಕ್ತಿಯ ಅಧಿಷ್ಠಾನವಾದ ಕಣ್ಣುಗಳನ್ನೇ ನೋಡಲು ಅಸಮರ್ಥವಾಗಿರುತ್ತದೆ. ಕನ್ನಡಿಯಲ್ಲಿ ನಾವು ನಮ್ಮ ಕಣ್ಣಿನ ಪ್ರತಿಬಿಂಬವನ್ನು ನೋಡಬಹುದೇ ವಿನಃ ನಿಜವಾದ ಕಣ್ಣುಗಳನ್ನಲ್ಲ. ಹಾಗೆಯೇ ಸರ್ಪದ ಕಚ್ಚಿ-ಕೊಲ್ಲುವ ಶಕ್ತಿಯು ಯಾವ ಪ್ರಾಣಿಯನ್ನಾದರೂ ಕೊಲ್ಲಬಹುದಾಗಿರುತ್ತದೆ. ಆದರೆ ಆ ವಿಷವು ಸರ್ಪದಲ್ಲೇ ಇದ್ದರೂ ಅದರಿಂದ ಸರ್ಪಕ್ಕೆ ಯಾವ ರೀತಿಯ ಬಾಧಕವೂ ಆಗಿರುವುದಿಲ್ಲ. ಅಂದರೆ ಸರ್ಪವು ಕಚ್ಚಿ ಇನ್ನೊಬ್ಬರನ್ನು ಕೊಲ್ಲಬಹುದೇ ಹೊರತು ತಾನು ಅದರಿಂದ ಸಾಯುವುದಿಲ್ಲ.

**ಓವೀ.7 :** ರಸವೇ ಜಿಹ್ವಾ ಶಕ್ತಿಯ ವಿಷಯವಾಗಿದೆ. ಆದುದರಿಂದ ಜಿಹ್ವೆಯು ಯಾವುದೇ ವಸ್ತುವಿನ ರುಚಿಯನ್ನು ತಿಳಿಯಬಲ್ಲದು. ಆದರೆ ಅದಕ್ಕೆ ತನ್ನ ರುಚಿಯನ್ನೇ ತಿಳಿಯಲು ಸಾಧ್ಯವಿಲ್ಲ. ಆದುದರಿಂದ ಯಾವುದೇ ಜಡದ ಶಕ್ತಿಯು ತನ್ನ ಅಧಿಷ್ಠಾನವನ್ನು ವಿಷಯಕರಿಸುವುದಿಲ್ಲ.

**ವಿವರಣೆ :** ಕೊನೆಯ ಉದಾಹರಣೆಯಾಗಿ ನಾಲಿಗೆಯು ಯಾವುದೇ ವಸ್ತುವನ್ನು ಬಾಯಿಯಲ್ಲಿ ಇಟ್ಟುಕೊಂಡಾಗ ಅದು ಲಾಲಾರಸದ ಜೊತೆಗೆ ಮಿಶ್ರವಾಗಿ ಅದರ ರುಚಿಯನ್ನು ತಿಳಿದು ಆ ವಸ್ತುವಿನ ಜ್ಞಾನವನ್ನು ಪಡೆಯಬಲ್ಲದು. ಆದರೆ ಹೀಗೆ ರಸವನ್ನು ವಿಷಯಕರಿಸುವ ಶಕ್ತಿಯು ತನ್ನ ಅಧಿಷ್ಠಾನವಾದ ನಾಲಿಗೆಯ ( ಜಿಹ್ವೇಂದ್ರಿಯದ ) ರಸವನ್ನೇ ( ರುಚಿಯನ್ನು ) ತಿಳಿಯಲು ಸಮರ್ಥವಾಗಿರುವುದಿಲ್ಲ. ಆದುದರಿಂದ ಯಾವುದೇ ಜಡ ಶಕ್ತಿ ಇದ್ದರೂ ಅದು ತನ್ನ ಅಧಿಷ್ಠಾನವನ್ನು ವಿಷಯಕರಿಸಲು ಸಾಧ್ಯವಿಲ್ಲ. ಜಡದ ಶಕ್ತಿಯು ಚೈತನ್ಯವಾಗಿದೆ ಎಂದರೂ ಕೂಡ ಆ ಚೈತನ್ಯವು ತನ್ನ ಅಧಿಷ್ಠಾನವಾದ ಜಡವನ್ನು ಅರಿಯಲಾರದು.

**ಓವೀ.8 :** ಒಂದು ವೇಳೆ ಜಡದ ಶಕ್ತಿಯು ಚೈತನ್ಯವಾಗಿದ್ದರೆ, ಆಗ ಚೈತನ್ಯವು ತನ್ನ ಅಧಿಷ್ಠಾನವಾದ ಜಡವನ್ನು ತಿಳಿಯಲಾಗುತ್ತಿರಲಿಲ್ಲ. ಆಗ ಜಡಕ್ಕೆ ಅಸ್ತಿತ್ವವು ಸಿದ್ಧವಾಗುತ್ತಿರಲಿಲ್ಲ.

**ವಿವರಣೆ :** ಹಿಂದಿನ ಉದಾಹರಣೆಗಳಿಂದ ಈ ಓವೀಯಲ್ಲಿ ಜಡ-ಚೈತನ್ಯಕ್ಕೆ ಸಂಬಂಧಪಟ್ಟಂತೆ ನಿರ್ಣಯವನ್ನು ತೆಗೆದುಕೊಳ್ಳಲಾಗಿದೆ. ಪ್ರತಿವಾದಿಗಳು (ಪೂರ್ವಪಕ್ಷ) ಹೇಳುವಂತೆ ಜಡವು ಒಂದುವೇಳೆ ಚೈತನ್ಯವನ್ನು ಅದರ ಶಕ್ತಿಯನ್ನಾಗಿ ಹೊಂದಿದ್ದರೆ ಆಗ ಎಲ್ಲವನ್ನೂ ತಿಳಿಯುವ ( ಪ್ರಕಾಶಿಸುವ ) ಚೈತನ್ಯವು ತನ್ನ ಅಧಿಷ್ಠಾನವಾದ ಜಡವನ್ನೇ ತಿಳಿಯಲು ಅಸಮರ್ಥವಾಗುತ್ತಿತ್ತು. ಆದರೆ ಜಡವು ತನ್ನನ್ನು 'ತಾನು ಇದ್ದೇನೆ' ಎಂದು ತಿಳಿಯಲು ಅಸಮರ್ಥವಾಗಿರುವುದರಿಂದ ಅದು ಇರುವುದಕ್ಕೆ ಪ್ರಮಾಣವೆಂದರೆ ಅದು ಚೈತನ್ಯದಿಂದ ತಿಳಿಯಲ್ಪಡಲೇಬೇಕಾಗಿರುತ್ತದೆ. ಆದರೆ ಚೈತನ್ಯವೇ ಆದರ ಶಕ್ತಿಯಾಗಿದ್ದಾಗ ಚೈತನ್ಯವು ತನ್ನ ಅಧಿಷ್ಠಾನವಾದ ಜಡವನ್ನೇ ತಿಳಿಯಲಾಗುತ್ತಿರಲಿಲ್ಲ. ಆಗ ತಿಳಿಯಲ್ಪಡದ ಜಡದ ಅಸ್ತಿತ್ವವು ಸಿದ್ಧವಾಗುತ್ತಿರಲಿಲ್ಲ.

**ಓವೀ.9 :** 'ಶಕ್ತಿಮದಸ್ತಿತ್ವ' ಎಂದರೆ ಶಕ್ತಿವಂತವಾದ (ಜಡದ) ಅಸ್ತಿತ್ವವು. ಜಡದ ಅಧಿಷ್ಠಾನದ ಅಸ್ತಿತ್ವವು ಸಿದ್ಧವಾಗದಿದ್ದಾಗ ಅದರ ಶಕ್ತಿಯ ಅಸ್ತಿತ್ವವೂ ಸಿದ್ಧವಾಗುವಂತಿಲ್ಲ. ಇದೇ ರೀತಿ ಪ್ರತಿವಾದಿಗಳಿಗೂ ಕೂಡ ತಮ್ಮ ಅಸ್ತಿತ್ವವು ಸಿದ್ಧವಾಗುವಂತಿಲ್ಲ ಮತ್ತು ಎಲ್ಲದಕ್ಕೂ ಶೂನ್ಯತ್ವವು ಬರುತ್ತದೆ.

**ವಿವರಣೆ :** 'ಶಕ್ತಿಮದಸ್ತಿತ್ವ'ವೆಂದರೆ 'ಶಕ್ತಿಮತ್ ಅಸ್ತಿತ್ವ', ಅಂದರೆ ಶಕ್ತಿಯನ್ನು ಹೊಂದಿದ ಜಡದ ಅಸ್ತಿತ್ವವಾಗಿದೆ. ಈ ಜಡವು ತನ್ನನ್ನು ತಾನೇ ತಿಳಿಯದಿರುವುದರಿಂದಲೂ, ಒಂದುವೇಳೆ ಚೈತನ್ಯವು ಅದರ ಶಕ್ತಿಯಾಗಿದ್ದರೂ ಕೂಡ ಆ ಚೈತನ್ಯವು ತನ್ನ ಅಧಿಷ್ಠಾನವನ್ನು ತಿಳಿಯಲಾರದಿರುವುದರಿಂದಲೂ ಜಡದ ಅಸ್ತಿತ್ವವು ಸಿದ್ಧವಾಗುವುದಿಲ್ಲ. ಏಕೆಂದರೆ ಅದು ಚೈತನ್ಯದಿಂದ ತಿಳಿಯಲ್ಪಡದೇ ಅದರ ಅಸ್ತಿತ್ವವು ಸಿದ್ಧವಾಗುವಂತಿಲ್ಲ. ಹಿಂದಿನ ಓವೀಯಲ್ಲಿ ಈ ವಿಚಾರವನ್ನು ವಿವರಿಸಲಾಗಿದೆ. ಈ ಓವೀಯಲ್ಲಿ ಈ ವಿಚಾರವನ್ನು ಮುಂದುವರಿಸಿರುತ್ತದೆ.

ಹೀಗೆ ಜಡದ (ಅಧಿಷ್ಠಾನದ) ಅಸ್ತಿತ್ವವು ಸಿದ್ಧವಾಗದೇ ಇರುವುದರಿಂದ ಅದರ ಶಕ್ತಿಯೂ ಕೂಡ ಇರಲು ಸಾಧ್ಯವಾಗುವುದಿಲ್ಲ. ಏಕೆಂದರೆ, ಶಕ್ತಿಯು ಸ್ವತಂತ್ರವಾಗಿ ಅದರ ಅಧಿಷ್ಠಾನವಿಲ್ಲದೇ ಇರಲಾರದು. ಹೀಗೆ ಚೈತನ್ಯವು ಜಡದ ಶಕ್ತಿಯಾಗಿದ್ದರೆ ಜಡವಾಗಲೀ ಅಥವಾ ಚೈತನ್ಯವಾಗಲೀ ಸಿದ್ಧವಾಗದೇ ಶೂನ್ಯತ್ವವು ಸಿದ್ಧವಾಗುತ್ತದೆ. ಇದೇ ರೀತಿ ಚೈತನ್ಯವು ಜಡದ ಶಕ್ತಿಯೆಂದು ವಾದಿಸುವವರೂ ಕೂಡ ಶೂನ್ಯತ್ವಕ್ಕೆ ತಲುಪುತ್ತಾರೆ. ಹೇಗೆಂದರೆ, ಅವರು ವಾದ ಮಾಡುವಾಗ ಅವರ ಬುದ್ಧಿ-ಮನ-ವಾಕ್-ಇಂದ್ರಿಯಗಳು ಸೂಕ್ಷ್ಮವಾದರೂ, ಜಡವಾಗಿರುವುದರಿಂದ ಅವರಲ್ಲಿರುವ ಚೈತನ್ಯವು ಈ ಜಡ ಕರಣಗಳ ಶಕ್ತಿ ಎಂದು ಅವರು

ಭಾವಿಸಿರುತ್ತಾರೆ. ಅವರ ಈ ತಪ್ಪು ನಿರ್ಣಯದಿಂದ ಅವರ ದೇಹಸಹಿತ ಈ ಜಡ ಕರಣಗಳಾಗಲೀ ಅಥವಾ ಚೈತನ್ಯವಾಗಲೀ ಅವುಗಳ ಅಸ್ತಿತ್ವವು ಸಿದ್ಧವಾಗದಿರುವುದರಿಂದ ಈ ಪ್ರತಿವಾದಿಗಳಿಗೂ ಶೂನ್ಯತ್ವವು ಬರುತ್ತದೆ. ಹೀಗೆ ಎಲ್ಲ ಮನುಷ್ಯರಿಗೆ ಶೂನ್ಯತ್ವ ಬರುವುದರಿಂದ ಉಳಿದ ಜಡ ಜಗತ್ತನ್ನು ತಿಳಿದು ಅದರ ಅಸ್ತಿತ್ವವನ್ನು ಸಿದ್ಧಪಡಿಸಲಾಗದೇ ಎಲ್ಲವೂ ಶೂನ್ಯದಲ್ಲಿ ಪರಿಸಮಾಪ್ತಿಯಾಗುತ್ತದೆ. ಆದುದರಿಂದ ಚೈತನ್ಯವನ್ನು ಜಡದ ಶಕ್ತಿ ಎನ್ನಕೂಡದು.

**ಓವೀ.10 :** ಒಂದುವೇಳೆ "ಚೈತನ್ಯವು ಜಡದ ಶಕ್ತಿ" ಎನ್ನುವುದು ಸತ್ಯವಾದರೆ, ಅಧಿಷ್ಠಾನದಿಂದಲೇ ಅದರ ಶಕ್ತಿಗೆ ಅಸ್ತಿತ್ವವು ಬರಬೇಕಾಗಿರುವುದರಿಂದ, 'ಜಡದ ಅಸ್ತಿತ್ವದಿಂದ ಚೈತನ್ಯಕ್ಕೆ ಅಸ್ತಿತ್ವವು ಬರುತ್ತದೆ' ಎಂದು ಹೇಳಬೇಕಾಗುತ್ತದೆ.

**ವಿವರಣೆ :** ಶಕ್ತಿಯು ತನಗೆ ತಾನೇ ಸ್ವತಂತ್ರವಾಗಿ ಇರಲಾರದು. ಶಕ್ತಿಯು ಯಾವಾಗಲೂ ಯಾವುದಾದರೂ ಅಧಿಷ್ಠಾನವನ್ನು ಅವಲಂಬಿಸಿಯೇ ಇರುತ್ತದೆ. ಉದಾಹರಣೆಗೆ ಬೆಂಕಿಯ ಸುಡುವ ಶಕ್ತಿಯು ಬೆಂಕಿ ಇಲ್ಲದೇ ಇರಲಾರದು. ಹಾಗೆಯೇ ರೂಪವನ್ನು ನೋಡುವ ಶಕ್ತಿಯು ಕಣ್ಣಿಲ್ಲದೇ ತಾನೇ ಇರಲಾರದು. ಆದುದರಿಂದ ಒಂದು ವೇಳೆ ಚೈತನ್ಯವೇ ಜಡದ ಶಕ್ತಿಯಾಗಿದ್ದರೆ ಈ ಚೈತನ್ಯದ ಅಸ್ತಿತ್ವಕ್ಕೆ ಆಧಾರವು ಜಡವೇ ಆಗಿರುತ್ತದೆ ಎಂದು ನಂಬಬೇಕಾಗುತ್ತದೆ. ಇದರಿಂದ ಚೈತನ್ಯದ ಅಸ್ತಿತ್ವವನ್ನು ಜಡದ ಅಸ್ತಿತ್ವದಿಂದ ಸಿದ್ಧಮಾಡಿದಂತಾಗುತ್ತದೆ. ಹಾಗಾದರೆ ಜಡದ ಅಸ್ತಿತ್ವವು ಹೇಗೆ ಸಿದ್ಧವಾಗುತ್ತದೆ ಎನ್ನುವ ಪ್ರಶ್ನೆಯು ಏಳುತ್ತದೆ. ಈ ವಿಚಾರವು ಮುಂದಿನ ಓವೀಯಲ್ಲಿ ಮುಂದುವರೆದಿದೆ. ಮುಂದಿನ ಓವೀಯ ಪ್ರಥಮ ಚರಣವನ್ನು ಈ ಓವೀಯಲ್ಲೇ ತೆಗೆದುಕೊಂಡು ವಿವರಿಸಲಾಗಿದೆ.

**ಓವೀ.11 :** ಆದರೆ ಜಡಕ್ಕೆ 'ತಾನಿದ್ದೇನೆ' ಎಂದು ತಿಳಿಯದಿರುವುದರಿಂದ ಅದರ ಅಸ್ತಿತ್ವವು ಸಿದ್ಧವಾಗಲು ಚೈತನ್ಯವೇ ಬೇಕಾಗುತ್ತದೆ.

**ವಿವರಣೆ :** ಹಿಂದಿನ ಓವೀಯಲ್ಲಿ ಒಂದು ವೇಳೆ ಚೈತನ್ಯವು ಜಡದ ಶಕ್ತಿ ಎಂದು ಒಪ್ಪಿದರೆ ಚೈತನ್ಯದ ಅಸ್ತಿತ್ವವು ಅದರ ಅಧಿಷ್ಠಾನವಾದ ಜಡದ ಅಸ್ತಿತ್ವವನ್ನು ಅವಲಂಬಿಸಬೇಕಾಗಿರುತ್ತದೆ ಎಂದು ತಿಳಿಸಲಾಗಿದೆ. ಈ ಓವೀಯಲ್ಲಿ ಜಡದ ಅಸ್ತಿತ್ವವು ತನಗೆ ತಾನೇ ಸಿದ್ಧವಾಗುವಂತಿಲ್ಲ ಎಂದು ನಿರೂಪಿಸಲಾಗಿದೆ. ಏಕೆಂದರೆ ಜಡಕ್ಕೆ 'ತಾನಿದ್ದೇನೆ' ಎಂದು ತಿಳಿಯುವುದಿಲ್ಲ. ಚೈತನ್ಯವು ಜಡದ ಅಧಿಷ್ಠಾನವಾದ್ದರಿಂದ ಅದನ್ನು ತಿಳಿಯುವಂತಿಲ್ಲ. ಹೀಗೆ ಎರಡರ ಅಸ್ತಿತ್ವವೂ ಸಿದ್ಧವಾಗದೇ ಶೂನ್ಯತ್ವ ಬರುತ್ತದೆ ಎಂದು ಹಿಂದೆ ಓವೀ ಸಂ.9 ರಲ್ಲಿ ಸಿದ್ಧಮಾಡಲಾಗಿದೆ. ಒಂದು ವೇಳೆ ಜಡದ ಅಸ್ತಿತ್ವವು ಅದರ

ಶಕ್ತಿಯಾದ ಚೈತನ್ಯದಿಂದಲೇ ತಿಳಿಯಲ್ಪಡುತ್ತದೆ ಎಂದು ಒಪ್ಪಿದರೆ ಆಗ ಬರುವ ದೋಷವನ್ನು ಮುಂದಿನ ಓವೀಯಲ್ಲಿ ವಿವರವಾಗಿ ತಿಳಿಸಲಾಗಿದೆ. ಈ ಓವೀಯ ಪ್ರಥಮ ಚರಣವನ್ನು ಹಿಂದಿನ ಓವೀಯಲ್ಲೇ ವಿವರಿಸಲಾಗಿದೆ.

**ಓವೀ.12 :** ಹೀಗೆ ಚೈತನ್ಯಕ್ಕೆ ಜಡದ ಶಕ್ತಿ ಎಂದು ತಪ್ಪಾಗಿ ಭಾವಿಸಿದರೆ ಆಗ ಅದು ಅನ್ಯೋನ್ಯಾಶ್ರಯ ದೋಷಕ್ಕೆ ಒಳಗಾಗುತ್ತದೆ. ಆದುದರಿಂದ ಚೈತನ್ಯವನ್ನು ಜಡದಶಕ್ತಿ ಎನ್ನಕೂಡದು.

**ವಿವರಣೆ :** ಜ್ಞಾನವು ( ಚೈತನ್ಯವು ) ಜಡದ ಶಕ್ತಿಯಾಗಿದೆ ಎಂದು ಹೇಳಿದರೆ ಆಗ ತಾರ್ಕಿಕವಾಗಿ ಶೂನ್ಯತ್ವವು ಸಿದ್ಧವಾಗುತ್ತದೆ ಎಂಬ ಮೊದಲನೆಯ ದೋಷವನ್ನು ಹಿಂದೆ ಹೇಳಲಾಗಿದೆ. ಇಲ್ಲಿ ಜ್ಞಾನವು ಜಡದ ಶಕ್ತಿಯಾದರೆ ಅನ್ಯೋನ್ಯಾಶ್ರಯವೆಂಬ ಎರಡನೆಯ ದೋಷವೂ ಬರುತ್ತದೆಂದು ಹೇಳಲಾಗಿದೆ. ಓವೀಸಂ.10 ರಲ್ಲಿ ಚೈತನ್ಯದ ಅಸ್ತಿತ್ವವನ್ನು ಅದರ ಅಧಿಷ್ಠಾನವಾದ ಜಡದ ಆಧಾರದ ಮೇಲೆ ಸಿದ್ಧವಾಗುತ್ತದೆ ಎಂದು ಹೇಳಲಾಗಿದೆ. ಆದರೆ ಓವೀ ಸಂ.11 ರಲ್ಲಿ ಇದಕ್ಕೆ ವಿರುದ್ಧವಾಗಿ ಜಡದ ಅಸ್ತಿತ್ವವು ಚೈತನ್ಯದಿಂದಲೇ ಸಿದ್ಧವಾಗಬೇಕೆಂದು ಹೇಳಲಾಗಿದೆ. ಹೀಗೆ ಚೈತನ್ಯವನ್ನು ಜಡದಿಂದ ಮತ್ತು ಜಡವನ್ನು ಚೈತನ್ಯದಿಂದ ಸಿದ್ಧ ಮಾಡಲು ಹೊರಟರೆ ಅದಕ್ಕೆ ಬರುವ ದೋಷವನ್ನು ಅನ್ಯೋನ್ಯಾಶ್ರಯ ದೋಷವೆಂದು ಕರೆಯುತ್ತಾರೆ. ಈ ದೋಷವು ಬರುವ ಕಾರಣದಿಂದಲೂ ಕೂಡ ಚೈತನ್ಯವು ಜಡ ಶಕ್ತಿಯಾಗುವಂತಿಲ್ಲವೆಂದು ಹೇಳಬಹುದು.

**ಓವೀ.13 :** ಸುಷುಪ್ತಿಯಲ್ಲಿ ( ಅಜ್ಞಾನವೆಂಬ 'ಕಾರಣದೇಹ' ದಲ್ಲಿ ) ಸೂಕ್ಷ್ಮ-ಸ್ಥೂಲ ರೂಪದ ಪ್ರಪಂಚವೆಲ್ಲವೂ ಲಯ ಹೊಂದುವುದನ್ನು ಅರಿಯುವ ಆತ್ಮನು ಅವಿನಾಶಿಯಾಗಿರುತ್ತಾನೆ.

**ವಿವರಣೆ :** ನನ್ನಿಂದ ( ಜೀವನಿಂದ ) ತಿಳಿಯಲ್ಪಡುತ್ತಿರುವ ಪ್ರಪಂಚವು ಇರುವುದಕ್ಕೆ ನನ್ನ ಅನುಭವವೇ ಕಾರಣವಾಗಿರುತ್ತದೆ. ಏಕೆಂದರೆ ಜಾಗ್ರತ ಹಾಗು ಸ್ವಪ್ನಾವಸ್ಥೆಗೆ ಕಟ್ಟುಬಿದ್ದಿರುವ ಜೀವ-ಜಗತ್ತುಗಳು ಸ್ವತಂತ್ರವಾಗಿ ಇರಲು ಸಾಧ್ಯವಿಲ್ಲ. ಜೀವ-ಜಗತ್ತುಗಳು ಅವುಗಳಿಗೆ ಕಾರಣವಾದ ಅಜ್ಞಾನವಿರುವ ಸುಷುಪ್ತಿ ಅವಸ್ಥೆಯಲ್ಲಿ ಲಯವಾಗಿರುತ್ತವೆ. ಸುಷುಪ್ತಿ ಮುಗಿದು ಜಾಗ್ರತ ಅವಸ್ಥೆಯು ಬಂದಮೇಲೆ ಅವು ಪುನಃ ವ್ಯಕ್ತವಾಗಿ ಹಿಂದಿನ ಜೀವ-ಜಗತ್ತುಗಳೇ ನಮಗೆ ಕಾಣಿಸಿಕೊಳ್ಳುತ್ತವೆ. ಆದುದರಿಂದ ಸುಷುಪ್ತಿಯಲ್ಲಿ ಅವು ಬೀಜರೂಪದಲ್ಲಿರುತ್ತವೆ ಎಂದು ಹೇಳಬಹುದು. ಸುಷುಪ್ತಿಯಲ್ಲಿ ಒಂದುವೇಳೆ ಜೀವ-ಜಗತ್ತುಗಳು ಬೀಜರೂಪದಲ್ಲಿ ಇದ್ದರೂ ಕೂಡ ಜಾಗ್ರತದಲ್ಲಿ 'ಅಲ್ಲಿ ಏನೂ ಇರಲಿಲ್ಲ' ಎಂಬ ಅನುಭವದ ಸ್ಮರಣೆಯು ನಮಗೆ ಆಗುವುದು ಸತ್ಯವಾಗಿದೆ. ಹಾಗಾದರೆ ಸುಷುಪ್ತಿಯಲ್ಲಿ ಏನೂ ಇರದ ಅನುಭವವನ್ನು ಪಡೆದವರು ಯಾರು? 'ಮೂರೂ ಅವಸ್ಥೆಗಳು ತನ್ನವು' ಎಂಬ ಅನುಭವವವು ಯಾವ ಸಾಕ್ಷಿಗೆ ( ಆತ್ಮನಿಗೆ ) ಇದೆಯೋ ಅದೇ ಸಾಕ್ಷಿಯು

( ಆತ್ಮನು ) ಸುಷುಪ್ತಿಗೂ ( ಅಜ್ಞಾನಕ್ಕೂ ) ಸಾಕ್ಷಿಯಾಗಿರುತ್ತಾನೆ. ಜೀವ-ಜಗತ್ತುಗಳು ಸಾಪೇಕ್ಷ ಸತ್ಯದಿಂದ ಜಾಗ್ರತ-ಸ್ವಪ್ನಗಳಲ್ಲಿ ತೋರಿ ಸುಷುಪ್ತಿಯಲ್ಲಿ ಮಾಯವಾಗುತ್ತವೆ. ಇಲ್ಲಿ ಸಾಪೇಕ್ಷ ಸತ್ಯವೆಂದರೆ ಜೀವನು ಜಗತ್ತನ್ನು ತಿಳಿಯದೇ ಜಗತ್ತಿನ ಅಸ್ತಿತ್ವ ( ಸತ್ಯತ್ವ ) ಸಿದ್ಧವಾಗಲಾರದು; ಮತ್ತು ಜಗತ್ತಿನ ಅಸ್ತಿತ್ವವಿಲ್ಲದೇ ಜೀವನು ಜಗತ್ತನ್ನು ತಿಳಿಯಲು ಸಾಧ್ಯವಿಲ್ಲ ಎನ್ನುವುದೇ ಆಗಿದೆ. ಆದುದರಿಂದ ಇವುಗಳು ಬೀಜ-ವೃಕ್ಷ ನ್ಯಾಯದಂತೆ ಪರಸ್ಪರ ಸಾಪೇಕ್ಷವಾಗಿವೆ. ಇವುಗಳ ಹುಟ್ಟು-ಸಾವುಗಳನ್ನು ನೋಡುವ ಆತ್ಮನು ನಿತ್ಯ ಸಾಕ್ಷಿಯಾಗಿದ್ದು ನಿರಪೇಕ್ಷ ನಿತ್ಯ-ಸತ್ಯನಾಗಿರುತ್ತಾನೆ, ಅಂದರೆ ಅವಿನಾಶಿಯಾಗಿರುತ್ತಾನೆ.

**ಓವೀ.14 :** ನನ್ನ ಹಾಗೂ ಉಳಿದ ಪ್ರಾಣಿ-ಮನುಷ್ಯರ ಭೌತಿಕ ದೇಹಗಳು ಶಾಶ್ವತವಾಗಿಲ್ಲ ಮತ್ತು ಅವುಗಳಿಗೆ ಸಾವು ಇದ್ದೇ ಇದೆ ಎಂದು ತಿಳಿದಿದ್ದೇವೆ. ಹಾಗೆಯೇ ಜಗತ್ತಿನಲ್ಲಿರುವ ಪ್ರತಿಯೊಂದು ವಸ್ತುವೂ ಕೂಡ ನಾಶವಾಗಲೇಬೇಕೆಂದು ನಮಗೆ ಅರಿವಾಗಿರುತ್ತದೆ.

**ವಿವರಣೆ :** ಪ್ರತಿಯೊಂದು ಸಸ್ಯವೂ, ಪ್ರಾಣಿಯೂ ಮತ್ತು ಮನುಷ್ಯನು, ಹುಟ್ಟು-ಸಾವುಗಳ ವಿಷಚಕ್ರದಲ್ಲಿ ಸಿಕ್ಕಿರುತ್ತವೆ. ಅಂದರೆ ನಾವು ನೋಡುತ್ತಿರುವ ಸಕಲ ಪ್ರಾಣಿಗಳ ಸ್ಥೂಲ ದೇಹವು ಸಾಯುವುದು ಆನಂತರ ನಾಶವಾಗುವುದು ನಿಶ್ಚಿತವಾಗಿರುತ್ತದೆ. ಏಕೆಂದರೆ, ಹುಟ್ಟಿದವನಿಗೆ ಸಾವು ನಿಶ್ಚಿತವಾಗಿರುತ್ತದೆ ( "ಜಾತಸ್ಯ ಹೀ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ...." (ಭ.ಗೀತಾ.II.27). ಹಾಗೆಯೇ ಜಗತ್ತಿನಲ್ಲಿ ಅನೇಕ ಪ್ರತ್ಯೇಕವಾದ ಭೌತಿಕ ವಸ್ತುಗಳಿವೆ. ಉದಾಹರಣೆಗೆ, ಮನುಷ್ಯ ನಿರ್ಮಿತವಾದ ಮೇಜು, ಕುರ್ಚಿ, ಮನೆ, ಮಂದಿರ, ಬಸ್ಸು, ರೈಲು, ಇತ್ಯಾದಿ ಹಾಗು ಪ್ರಕೃತಿ ನಿರ್ಮಿತವಾದ ಕೆರೆ, ನದಿ, ಗುಡ್ಡ, ಮುಂತಾದುವುಗಳಿವೆ. ಇವುಗಳಿಗೂ ಕೂಡ ಭವಿಷ್ಯದಲ್ಲಿ ನಾಶ ತಪ್ಪಿದ್ದಲ್ಲವೆಂದು ನಮಗೆ ತಿಳಿದಿದೆ.

**ಓವೀ.15 :** ಆದರೆ ಔದುಂಬರ ವೃಕ್ಷದ ಅತ್ತಿ ಹಣ್ಣುಗಳಲ್ಲಿರುವ ಸಣ್ಣ ಕೀಟಗಳು ಆ ಹಣ್ಣನ್ನು ನಿತ್ಯವೆಂದೇ ಭಾವಿಸುವುವು. ಹಾಗೆಯೇ ಮನುಷ್ಯ ದೇಹದಲ್ಲಿರುವ ಅತ್ಯಂತ ಸೂಕ್ಷ್ಮ ಕ್ರಿಮಿಗಳೂ ಕೂಡ ಆ ದೇಹವನ್ನು ನಾಶವಾಗುವುದಿಲ್ಲವೆಂದೇ ತಿಳಿಯುವುವು.

**ವಿವರಣೆ :** ಔದುಂಬರ ವೃಕ್ಷದ ಅತ್ತಿ ಹಣ್ಣುಗಳಲ್ಲಿ ಅನೇಕ ಹುಳಗಳು ಅಥವಾ ಕೀಟಗಳಿರುವುದು ಸರ್ವೇ ಸಾಮಾನ್ಯವಾಗಿದೆ. ಅವುಗಳಿಗೆ ಆ ಹಣ್ಣೇ ಒಂದು ಬ್ರಹ್ಮಾಂಡದಂತೆ ಕಾಣುತ್ತದೆ. ಅವುಗಳ ಆಯುಷ್ಯವು ಅತ್ಯಂತ ಕಡಿಮೆಯಾದ್ದರಿಂದ ಅವು ಹುಟ್ಟಿ ಸಾಯುವುದು ಆ ಹಣ್ಣಿನಲ್ಲೇ ಆಗಿರುತ್ತದೆ. ಆದುದರಿಂದ ಆ ಕೀಟಗಳು ಆ ಹಣ್ಣನ್ನು ನಿತ್ಯವೆಂದೇ ತಿಳಿಯುತ್ತವೆ. ಹಾಗೆಯೇ ಕೋಟಿಗಟ್ಟಲೆ ಕ್ರಿಮಿಗಳನ್ನು ನಮ್ಮ ದೇಹವು ಹೊಂದಿದ್ದು

ಅವುಗಳೂ ಕೂಡ ನಮ್ಮ ದೇಹದಲ್ಲೇ ಹುಟ್ಟಿ ಸಾಯುತ್ತವೆ. ಅಂತಹ ಸೂಕ್ಷ್ಮ ಕ್ರಿಮಿಗಳು ಅತ್ತಿ ಹಣ್ಣಿನಲ್ಲಿರುವ ಕೀಟಗಳಂತೆ, ನಮ್ಮ ದೇಹವನ್ನು ನಿತ್ಯವೆಂದೇ ಭಾವಿಸುತ್ತವೆ.

ಓವೀ.16 : ಇದೇ ರೀತಿ ಕೀಟಗಳಂತೆ, ಮಂದ ಬುದ್ಧಿಯ ಜನರು ತಾವು ಹುಟ್ಟಿ ಸಾಯುವುದನ್ನು ತಾವಿರುವ ಈ ಬ್ರಹ್ಮಾಂಡಕ್ಕೆ ಹೋಲಿಸಿ ಈ ಬ್ರಹ್ಮಾಂಡವು ಅವಿನಾಶಿಯೆಂದು ತಿಳಿಯುತ್ತಿದ್ದಾರೆ.

ವಿವರಣೆ : ಹಿಂದೆ ತಿಳಿಸಿದ ಕ್ರಿಮಿ ಕೀಟಗಳಿಗೆ ಮನುಷ್ಯರನ್ನು ಈ ಓವೀಯಲ್ಲಿ ಹೋಲಿಸಲಾಗಿದೆ. ಮನುಷ್ಯರೂ ಕೂಡ ಕೀಟಗಳಂತೆ ಈ ಬ್ರಹ್ಮಾಂಡದಲ್ಲೇ ಹುಟ್ಟಿ ಸಾಯುತ್ತಿದ್ದಾರೆ. ಹಾಗೆಯೇ ಅನೇಕ ಪುನರ್ಜನ್ಮಗಳನ್ನು ಪಡೆಯುತ್ತಿದ್ದಾರೆ ಎಂಬ ನಂಬಿಕೆಯನ್ನೂ ಹೊಂದಿದ್ದಾರೆ. ಆದರೆ ಈ ಜನರು ಈ ಬ್ರಹ್ಮಾಂಡವನ್ನು ಅವಿನಾಶಿಯೆಂದೇ ತಿಳಿದಿದ್ದಾರೆ. ಬ್ರಹ್ಮಾಂಡದಲ್ಲಿರುವ ಅಸಂಖ್ಯಾತ ತಾರೆಗಳು, ಗ್ರಹಗಳು, ಉಳಿದ ಆಕಾಶಕಾಯಗಳು ನಾಶವಾಗುತ್ತವೆ ಎಂದು ಅವರಿಗೆ ನಂಬುವುದು ಕಷ್ಟವಾಗುತ್ತದೆ. ಜಗತ್ತನ್ನು ಆವರಿಸಿರುವ ಈ ಪಂಚಭೂತಗಳಾದ ಪೃಥ್ವಿ, ನೀರು, ಬೆಂಕಿ, ಗಾಳಿ ಮತ್ತು ಆಕಾಶಗಳು ಶಾಶ್ವತವಾಗಿರುತ್ತವೆ (ಅವಿನಾಶಿಯಾಗಿವೆ) ಎಂದೇ ಅವರು ನಂಬುತ್ತಾರೆ.

ಓವೀ.17 : ಅತ್ತಿಹಣ್ಣಿನಲ್ಲಿರುವ ಕ್ರಿಮಿ-ಕೀಟಗಳು ಹೇಗೆ ತಪ್ಪಾಗಿ ಹಣ್ಣುಗಳನ್ನು ನಿತ್ಯವೆಂದು ತಿಳಿದಿದ್ದಾವೋ ಮತ್ತು ಮನುಷ್ಯನ ದೇಹದಲ್ಲಿರುವ ಕ್ರಿಮಿ-ಕೀಟಗಳು ಹೇಗೆ ತಪ್ಪಾಗಿ ದೇಹವನ್ನು ನಿತ್ಯವೆಂದು ತಿಳಿದಿದ್ದಾವೋ ಹಾಗೆಯೇ ಮೂಢ ಜನರು ಈ ಬ್ರಹ್ಮಾಂಡವನ್ನು ತಪ್ಪಾಗಿ ತಿಳಿದಿರುವಂತೆ ಅದು ನಿತ್ಯವಲ್ಲ.

ವಿವರಣೆ : ಅತ್ತಿಹಣ್ಣಾಗಲೀ ಅಥವಾ ನರದೇಹವಾಗಲೀ ನಿತ್ಯವೆಂದು ತಿಳಿದಿರುವ ಕ್ರಿಮಿ-ಕೀಟಗಳಿಗೆ ಸರಿಯಾದ ಜ್ಞಾನವಿಲ್ಲವೆಂಬುದು ತಿಳಿದ ವಿಷಯವೇ ಆಗಿರುತ್ತದೆ. ಅವು ನಾಶವಾಗುತ್ತವೆ ಎನ್ನುವುದು ನಮಗೆ ಪ್ರತ್ಯಕ್ಷ ಪ್ರಮಾಣವಾಗಿದೆ. ಇದೇ ರೀತಿ ಮೂಢ ಜನರು ತಪ್ಪಾಗಿ ತಿಳಿದಿರುವಂತೆ ಬ್ರಹ್ಮಾಂಡವು ನಿತ್ಯವಾಗಿರುವುದಿಲ್ಲ. ಪಂಚಭೂತಗಳಿಂದ ಮಾಡಲ್ಪಟ್ಟ ಈ ಬ್ರಹ್ಮಾಂಡವು ನಿತ್ಯವೋ ಅಥವಾ ಅನಿತ್ಯವೋ ಅನ್ನುವುದನ್ನು ನಿರ್ಧರಿಸಲು ಮೊದಲು ಈ ಪಂಚಭೂತಗಳನ್ನೇ ಒಂದೊಂದಾಗಿ ತಗೆದುಕೊಂಡು ಅವುಗಳ ನಿತ್ಯಾನಿತ್ಯಗಳನ್ನು ನಿರ್ಧರಿಸಬೇಕಾಗುತ್ತದೆ. ಮುಂದಿನ ಓವೀಯಿಂದ ಅನೇಕ ಓವೀಗಳಲ್ಲಿ ಈ ಪಂಚಭೂತಗಳು ನಿತ್ಯವಾಗಿಲ್ಲವೆಂದೂ ತನ್ಮೂಲಕ ಬ್ರಹ್ಮಾಂಡವು ಕೂಡ ಅನಿತ್ಯವೆಂದೂ ತೋರಿಸಲಾಗಿದೆ.

**ಓವೀ.18 :** ದೇಹವು ಹುಟ್ಟಿದಮೇಲೆ ಅಲುಗಾಡುತ್ತದೆ, ನಡೆದಾಡುತ್ತದೆ, ವರ್ಧನ ಹೊಂದುತ್ತದೆ, ಕ್ಷೀಣವಾಗುತ್ತದೆ, ಮತ್ತು ಕೊನೆಯಲ್ಲಿ ನಾಶಹೊಂದುತ್ತದೆ. ಇಂತಹ ವಿಕಾರವುಳ್ಳ ಯಾವುದೇ ಪದಾರ್ಥವಾಗಲೀ ಅದು ಉತ್ಪತ್ತಿ ನಾಶಗಳನ್ನು ಹೊಂದಲೇಬೇಕಾಗುತ್ತದೆ.

**ವಿವರಣೆ :** ಯಾವುದೇ ವಿಕಾರವಾಗುವ ವಸ್ತುವಿಗೆ ಉತ್ಪತ್ತಿ ನಾಶಗಳು ನಿಶ್ಚಿತವಾಗಿ ಇರುತ್ತವೆ. ಪಂಚಭೂತಗಳೂ ಕೂಡ ಇದಕ್ಕೆ ಹೊರತಲ್ಲ ಎಂದು ತೋರಿಸುವ ಮೊದಲು ನಮ್ಮ ದೇಹವನ್ನೇ ಉದಾಹರಣೆಯಾಗಿ ತೆಗೆದುಕೊಂಡು ಈ ಓವೀಯಲ್ಲಿ ವಿವರಿಸಲಾಗಿದೆ. ನಮ್ಮ ದೇಹವು ಅನೇಕ ವಿಕಾರಗಳನ್ನು ಹೊಂದುತ್ತಿರುವುದು ನಮಗೆ ಪ್ರತ್ಯಕ್ಷ ವೇದ್ಯವಾಗಿರುತ್ತದೆ. ಅದು ಮಗುವಿದ್ದಾಗ ಅಲುಗಾಡುವುದು, ಅಳುವುದು, ಮುಂತಾದ ಕ್ರಿಯೆಗಳನ್ನು ಮಾಡುತ್ತದೆ. ಸ್ವಲ್ಪ ದೊಡ್ಡದಾದಾಗ ಓಡಾಡುವುದನ್ನೂ, ನಂತರ ಬಾಲ್ಯಾವಸ್ಥೆ ಹಾಗೂ ಯೌವನಾವಸ್ಥೆಯಲ್ಲಿ ವರ್ಧನವಾಗುವುದನ್ನು ನೋಡತ್ತೇವೆ. ನಂತರ ಅದು ಕ್ಷೀಣಿಸುತ್ತಾ ವೃದ್ಧತ್ವವನ್ನು ಹೊಂದಿ ನಾಶವಾಗುವುದನ್ನೂ ಕಾಣುತ್ತೇವೆ. ಆದುದರಿಂದ ವಿಕಾರಕ್ಕೆ ತುತ್ತಾಗುವ ಅದು ಮೊದಲು ಉತ್ಪತ್ತಿಯನ್ನೂ ನಂತರ ನಾಶವನ್ನೂ ಹೊಂದಲೇ ಬೇಕಾಗುತ್ತದೆ.

**ಓವೀ.19 :** ಪೃಥ್ವಿಯು ಕಂಪನಕ್ಕೊಳಗಾಗುವುದು, ಚಲಿಸುವುದು, ಅನೇಕವೇಳೆ ನೀರಿನಿಂದ ಭಗ್ನವಾಗುವುದು – ಹೀಗೆ ವಿಕಾರವುಳ್ಳ ಪೃಥ್ವಿಗೆ ಉತ್ಪತ್ತಿ-ನಾಶಗಳಿರುತ್ತವೆ.

**ವಿವರಣೆ :** ಪಂಚಭೂತಗಳಲ್ಲಿ ಒಂದಾದ ಪೃಥ್ವಿಯೂ ಕೂಡ ನಿತ್ಯವಲ್ಲ. ಅದು ವಿಕಾರಹೊಂದುವುದರಿಂದ ಅದಕ್ಕೆ ಉತ್ಪತ್ತಿ-ನಾಶಗಳು ಇರುತ್ತವೆ ಎಂದು ಇಲ್ಲಿ ತೋರಿಸಲಾಗಿದೆ.

ಭೂಮಿಯು ಅನೇಕ ವೇಳೆ ಭೂ-ಕಂಪನಗಳಿಗೆ ಒಳಗಾಗುತ್ತದೆ. ಆಗ ಅದು ಅಲುಗಾಡುವುದು, ನಡುಗುವುದು, ಭೂ-ಕುಸಿತವಾಗುವುದು ಮುಂತಾದುವುಗಳು ಸಾಮಾನ್ಯವಾಗಿರುತ್ತವೆ. ಜಲ ಪ್ರವಾಹದಿಂದಲೂ ಮಣ್ಣು ಕೊಚ್ಚಿ ಹೋಗುತ್ತದೆ. ಹಾಗು ಇನ್ನೊಂದು ಕಡೆ ಮಣ್ಣು ಬೆಟ್ಟದಂತೆ ಶೇಖರಿಸಲ್ಪಡುತ್ತದೆ. ಮನುಷ್ಯನೂ ಗಣಿ ಕೆಲಸದ ನಿಮಿತ್ತ ಹಾಗೂ ರೈಲ್ವೇ ಮುಂತಾದ ಅಭಿವೃದ್ಧಿ ಕಾರ್ಯಗಳಿಗಾಗಿ ಗುಡ್ಡವನ್ನು ನೆಲಸಮಮಾಡಿ ದೊಡ್ಡ ಕಂದಕಗಳನ್ನು ಸೃಷ್ಟಿಸುತ್ತಾನೆ. ಕಾಡು-ಮೇಡುಗಳನ್ನೂ ಕಡಿದು ದೊಡ್ಡ ದೊಡ್ಡ ಭವನಗಳನ್ನು ಕಟ್ಟುತ್ತಾನೆ. ಹೀಗಾಗಿ ಪೃಥ್ವಿಯು ವಿಕಾರವಾಗುತ್ತಿದೆ. ಆದುದರಿಂದ ಅದು ನಿತ್ಯವೂ ಅವಿನಾಶಿಯೂ ಆಗಲಾರದು. ಅದಕ್ಕೆ ಉತ್ಪತ್ತಿ ನಾಶಗಳುಂಟು.

ಓವೀ.20 : ಜಲವೂ ಕೂಡ ಹೆಚ್ಚಾಗುವುದು ಮತ್ತು ಕಡಿಮೆಯಾಗುವುದು, ಚಲಿಸುವುದು, ಅಲುಗಾಡುವುದು, ಶಬ್ದ-ಗುಣದಿಂದ ಕೂಡಿರುವುದು ಇನ್ನೂ ಮುಂತಾದ ವಿಕಾರಗಳಿರುವುದರಿಂದ ಅದು ಉತ್ಪತ್ತಿ ನಾಶಗಳನ್ನು ಹೊಂದಿರುತ್ತದೆ.

ವಿವರಣೆ : ಈಗ ಎರಡನೆಯದಾಗಿ, ಜಲವನ್ನೂ ಕೂಡ ವಿಕಾರವಾಗುವುದರಿಂದ ಅದಕ್ಕೆ ಉತ್ಪತ್ತಿ ನಾಶಗಳುಂಟು ಎಂದು ತೋರಿಸಲಾಗಿದೆ. ಸೂರ್ಯನ ಶಾಖಕ್ಕೆ ಪ್ರತಿನಿತ್ಯ ಸಮುದ್ರದ ನೀರು ಆವಿಯಾಗಿ ಹೋಗುತ್ತಿರುವುದರಿಂದ ನೀರಿನ ಪ್ರಮಾಣವು ಕಮ್ಮಿಯಾಗುತ್ತಾ ಹೋಗುತ್ತದೆ. ಆದರೆ ಅದೇ ಮಳೆಯ ರೂಪದಲ್ಲಿ ಪುನಃ ಭೂಮಿಗೆ ಸೇರುತ್ತದೆ. ಹೀಗೆ ನೀರಿನ ಪ್ರಮಾಣವು ಹೆಚ್ಚು ಕಡಿಮೆ ಆಗುತ್ತಿರುತ್ತದೆ. ನೀರಿಗೆ ಮೇಲಿನಿಂದ ಕೆಳಕ್ಕೆ ಚಲಿಸುವ ಗುಣವಿರುವುದರಿಂದ ನದಿಗಳ ನೀರು ನಿರಂತರ ಸಮುದ್ರಕ್ಕೆ ಹರಿಯುತ್ತಿರುತ್ತದೆ. ನೀರಿಗೆ ತನ್ನದೇ ಆದ ಆಕಾರವಿಲ್ಲ. ಯಾವ ಆಕಾರವನ್ನು ಕೂಡ ತಗೆದುಕೊಳ್ಳಬಲ್ಲದು. ಅಂದರೆ ಅದು ಅಲುಗಾಡುವುದರಿಂದ ತನ್ನ ಗಾತ್ರವನ್ನು ಬದಲಾಯಿಸಬಲ್ಲದು. ಅದು ಮೇಲಿನಿಂದ ಬೀಳುವಾಗ ಶಬ್ದವನ್ನು ಮಾಡುತ್ತದೆ. ಆದರೆ ಈ ಶಬ್ದ ಗುಣವು ಕ್ಷಣಿಕವಾಗಿ ತೋರಿ ನಾಶವಾಗುತ್ತದೆ. ಜಲಕ್ಕೆ ಈ ವಿಕಾರಗಳಿರುವುದರಿಂದ ಅದು ಕೂಡ ಉತ್ಪತ್ತಿ-ನಾಶಗಳನ್ನು ಹೊಂದುತ್ತದೆ.

ಓವೀ.21 : ಹಾಗೆಯೇ ತೇಜವು ಅಂದರೆ ಬೆಂಕಿಯು ಕೂಡ ವರ್ಧಿಸುತ್ತದೆ ಮತ್ತು ಕ್ಷಯ ಹೊಂದುತ್ತದೆ. ಅದು ದೃಶ್ಯವಾಗಿದೆ ಮತ್ತು ಶಬ್ದವನ್ನುಂಟು ಮಾಡುತ್ತದೆ. ಈ ರೀತಿ ವಿಕಾರವನ್ನು ಹೊಂದುವ ತೇಜಕ್ಕೂ ಉತ್ಪತ್ತಿ-ನಾಶಗಳುಂಟು.

ವಿವರಣೆ : ಇಂಧನವು ಹೆಚ್ಚು ಹೆಚ್ಚಾಗಿ ಸಿಕ್ಕಂತೆ, ಬೆಂಕಿಯ ಜ್ವಾಲೆಗಳು ಮೇಲು ಮೇಲಕ್ಕೆ ವ್ಯಾಪಿಸುತ್ತವೆ. ಹಾಗೆಯೇ ಇಂಧನವು ಕಡಿಮೆಯಾಗುತ್ತಾ ಹೊಂದಂತೆ ಜ್ವಾಲೆಯು ಸಣ್ಣದಾಗುತ್ತಾ ಹೋಗಿ ಕೊನೆಗೆ ಬೆಂಕಿಯು ನಂದಿ ಹೋಗುತ್ತದೆ. ಹೀಗೆ ಬೆಂಕಿಗೆ ವೃದ್ಧಿ-ಕ್ಷಯಗಳಿವೆ. ಪೃಥ್ವಿ ಹಾಗು ಜಲದಂತೆ ಅಗ್ನಿಯೂ ಕೂಡ ನಮಗೆ ದೃಶ್ಯವಾಗಿದೆ. "ಯದ್ದೃಷ್ಟಂ ತನ್ನಷ್ಟಂ" ಎನ್ನುವಂತೆ ನೋಡಲ್ಪಟ್ಟದ್ದೆಲ್ಲವೂ ವಿಕಾರವಾಗುವುದರಿಂದ ನಷ್ಟವಾಗಿ ಹೋಗುತ್ತವೆ. ಬೆಂಕಿಗೂ ಕೂಡ ಶಬ್ದವನ್ನು ಉಂಟುಮಾಡುವ ಶಕ್ತಿ ಇದೆ. ಕೆಲವೊಂದು ಇಂಧನಗಳಿಂದ ಜ್ವಾಲೆಗಳು ಎದ್ದಾಗ ಶಬ್ದಮಾಡುತ್ತವೆ. ಆದರೆ ಈ ಶಬ್ದವು ಕ್ಷಣಿಕವಿದ್ದು ಬೆಂಕಿಯ ವಿಕಾರ ಸ್ವರೂಪವನ್ನು ತಿಳಿಸುತ್ತದೆ. ಹೀಗೆ ವಿಕಾರವಿರುವ ಬೆಂಕಿಗೆ ಉತ್ಪತ್ತಿ-ನಾಶಗಳು ಇರಲೇಬೇಕು.

**ಓವೀ.22** : ವಾಯುವು ಚಲಿಸುವುದು ಮತ್ತು ಅದು ಸ್ಪರ್ಶೇಂದ್ರಿಯಕ್ಕೆ ವಿಷಯವಾಗಿ ತೋರುವುದು. ಅದು ವೇಗವಾಗಿ ಬೀಸುವಾಗ ಶಬ್ದವನ್ನೂ ಮಾಡುವುದು. ಈ ವಿಕಾರಗಳಿಂದ ವಾಯುವಿಗೂ ಉತ್ಪತ್ತಿ-ನಾಶಗಳುಂಟು.

**ವಿವರಣೆ** : ವಾಯುವು ಸದಾ ಚಲಿಸುತ್ತಾ ಇರುವುದೇ ಅದರ ಸ್ವಭಾವವಾಗಿರುತ್ತದೆ. ಅದು ಕಣ್ಣಿಗೆ ಕಾಣದಿದ್ದರೂ ಕೂಡ ನಮ್ಮ ಸ್ಪರ್ಶೇಂದ್ರಿಯಕ್ಕೆ ವಿಷಯವಾಗಿರುತ್ತದೆ. ಹಾಗಾಗಿ ನಾವು ಸ್ಪರ್ಶದಿಂದ ಗಾಳಿಯು ಬಿಸಿಯಾಗಿದೆಯೋ ಅಥವಾ ತಂಪಾಗಿದೆಯೋ ಎಂದು ಹೇಳಬಹುದು. ಹೀಗಾಗಿ ವಾಯುವಿನ ಶಾಖವು ಏರು-ಪೇರಾಗುವುದರಿಂದ ಅದೂ ಕೂಡ ವಿಕಾರವಾಗುತ್ತದೆಂದು ತಿಳಿಯುತ್ತದೆ. ವಾಯುವು ವೇಗವಾಗಿ ಬೀಸುವಾಗ ಉಂಟಾಗುವ ಘರ್ಷಣೆಯಿಂದ ಶಬ್ದ ಉಂಟಾಗುತ್ತದೆ. ಈ ಶಬ್ದವು ಸ್ವಲ್ಪ ಕಾಲ ಮಾತ್ರ ಇದ್ದು ನಾಶವಾಗುವುದರಿಂದಲೂ ವಾಯುವು ವಿಕಾರವಾಗುತ್ತದೆ ಎಂದು ಹೇಳಬಹುದು. ವಾಯುವು ಈ ರೀತಿಯ ವಿಕಾರಸ್ವರೂಪವನ್ನು ಹೊಂದಿರುವುದರಿಂದ ಅದಕ್ಕೆ ಉತ್ಪತ್ತಿ ನಾಶಗಳಿವೆ.

**ಓವೀ.23** : ಆಕಾಶವೆಂಬ ಕೊನೆಯ ಪಂಚಭೂತವು ತಾನು ಅವಕಾಶ ಕೊಟ್ಟ ಉಳಿದ ಭೂತಗಳಿಂದ ಅದು ಛಿದ್ರವಾಗಿರುವಂತೆ ತೋರುವುದು. ಆಕಾಶವೂ ಕೂಡ ಶಬ್ದ-ಗುಣದಿಂದ ಕೂಡಿದೆ. ಈ ಕಾರಣಗಳಿಂದ ಆಕಾಶವು ವಿಕಾರವಾಗಿದೆ ಮತ್ತು ಉತ್ಪತ್ತಿ-ನಾಶಗಳನ್ನು ಹೊಂದಿದೆ.

**ವಿವರಣೆ** : ಈ ಓವೀಯಲ್ಲಿ ಆಕಾಶವೆಂಬ ಕೊನೆಯ ಪಂಚಭೂತವು ಕೂಡ ವಿಕಾರವಾಗಿರುವುದರಿಂದ ಅದೂ ಕೂಡ ಉತ್ಪತ್ತಿ ನಾಶಗಳನ್ನು ಹೊಂದಿದೆ ಎಂದು ತೋರಿಸಲಾಗಿದೆ. ಯಾವುದು ಅವಕಾಶವನ್ನು ಕೊಡುವುದೋ ಅದೇ ಆಕಾಶವಾಗಿರುತ್ತದೆ. ಆಕಾಶವು ಉಳಿದ ನಾಲ್ಕು ಭೂತಗಳಿಗೆ ಅವಕಾಶವನ್ನು ಕೊಡುತ್ತದೆ. ಈ ನಾಲ್ಕು ಭೂತಗಳ ಹಿನ್ನೆಲೆಯಿಲ್ಲದೇ ಆಕಾಶವನ್ನು ಗುರುತಿಸುವುದೇ ಸಾಧ್ಯವಿಲ್ಲ. ಆದುದರಿಂದ ಈ ಭೂತಗಳು ಆಕಾಶದ ತುಂಬ ಹಂಚಿ ಹೋಗಿರುವುದರಿಂದ ಇವುಗಳ ಮಧ್ಯೆ ಆಕಾಶವಿರುವುದನ್ನು ಗುರುತಿಸಬಹುದು. ಆದುದರಿಂದ ತಾರೆ-ಗ್ರಹಗಳ ಮಧ್ಯೆ ಆಕಾಶವು ಛಿದ್ರವಾಗಿರುವಂತೆ ಕಾಣುತ್ತದೆ. ಶಬ್ದವು ಇದರ ಗುಣವಾಗಿದ್ದು ನಮ್ಮಿಂದ ಕೇಳಬಲ್ಲ ಶಬ್ದವು ಸದಾ ಕ್ಷಣಿಕವಾಗಿಯೇ ಇರುತ್ತದೆ. ಈ ಕಾರಣಗಳಿಂದ ಆಕಾಶವನ್ನೂ ಕೂಡ ವಿಕಾರಿ ಎಂದೂ ಮತ್ತು ಅದು ಉತ್ಪತ್ತಿ-ನಾಶಗಳನ್ನು ಹೊಂದಿದೆ ಎಂದೂ ಹೇಳಬಹುದು.

**ಓವೀ.24** : ಪ್ರತ್ಯಕ್ಷವಾಗಿ ಸದಾ ಚಲನಶೀಲವಾಗಿರುವ ವಾಯುವಿನ ಕ್ಷೇತ್ರದಲ್ಲಿಯೇ ಎಲ್ಲ ಗ್ರಹ-ಗೋಳಗಳಿರುವುದರಿಂದ, ಅವೂ ಸಹ ಸದಾ ಪ್ರಳಯಕಾಲದವರೆಗೆ ಚಲನಶೀಲವಾಗಿರುತ್ತದೆ.

**ವಿವರಣೆ :** ಇಲ್ಲಿಯವರೆಗೆ ಪಂಚ ಮಹಾಭೂತಗಳು ಉತ್ಪತ್ತಿ ನಾಶಗಳನ್ನು ಹೊಂದುತ್ತವೆ ಎನ್ನುವುದನ್ನು ಈವರೆಗೆ ತೋರಿಸಿದಮೇಲೆ ಈ ಓವೀಯಲ್ಲಿ ಹಾಗು ಮುಂದಿನ ಓವೀಯಲ್ಲಿ ಸಮಸ್ತ ಗ್ರಹಗಳೂ ಕೂಡ ಚಲನಶೀಲವಾಗಿರುವುದರಿಂದ ಅವುಗಳೂ ಉತ್ಪತ್ತಿ ನಾಶಗಳನ್ನು ಹೊಂದಿವೆ ಎಂಬುದನ್ನು ತೋರಿಸಲಾಗಿದೆ. ಈ ಓವೀಯಲ್ಲಿ ಈ ಗ್ರಹಗಳು ಚಲನಶೀಲವಾಗಿವೆ ಎಂಬುದನ್ನು ಹೇಳಿದೆ. ಎಲ್ಲ ಗ್ರಹಗಳಿಗೂ ತಮ್ಮದೇ ಆದ ವಾಯು ಗೋಳಗಳಿವೆ. ವಾಯುವು ಸ್ವರೂಪತಃ ಚಲನಶೀಲವಾಗಿರುವುದು ಸದಾ ಪ್ರತ್ಯಕ್ಷವಿರುತ್ತದೆ. ಈ ಸದಾ ಚಲನಶೀಲ ವಾಯುಮಂಡಲದ ಒಳಗೆ ಇರುವ ಗ್ರಹಗಳೂ ಕೂಡ ಸದಾ ಚಲನಶೀಲವಾಗಿರುವುದು ಕಂಡುಬರುತ್ತದೆ. ಪ್ರಳಯಕಾಲದವರೆಗೂ ಈ ಗ್ರಹಗಳು ತಿರುಗುತ್ತಿರುತ್ತವೆ ಎಂದು ಹೇಳಬಹುದು.

**ಓವೀ.25 :** ಯಾವುದು ವಿಕಾರವಾಗುತ್ತದೋ ಅದು ಉತ್ಪತ್ತಿ ನಾಶಗಳನ್ನು ಹೊಂದುತ್ತದೆ ಎಂಬ ಸಾಮಾನ್ಯ ಸಿದ್ಧಾಂತದಂತೆ ಈ ಗ್ರಹದ ಗೋಳಗಳೂ ಉತ್ಪತ್ತಿ ನಾಶಗಳನ್ನು ಹೊಂದುತ್ತವೆ.

**ವಿವರಣೆ :** ಹಿಂದಿನ ಓವೀಯಲ್ಲಿ ಎಲ್ಲ ಗ್ರಹ-ಗೋಳಗಳು ವಾಯುವಿನಂತೆ ನಿರಂತರ ಚಲನಶೀಲವಾಗಿರುವುವೆಂದು ತಿಳಿಸಲಾಗಿದೆ. ಪ್ರತಿಯೊಂದು ಗ್ರಹವೂ ಪಂಚಭೂತಾತ್ಮಕವಾಗಿದ್ದು ಪ್ರತಿಯೊಂದು ಭೂತವೂ ಉತ್ಪತ್ತಿ ನಾಶವನ್ನು ಹೊಂದುತ್ತದೆ ಎಂದು ಮೊದಲೇ ತಿಳಿಸಿರುವುದರಿಂದ ಈ ಗ್ರಹಗಳೂ ಕೂಡ ಉತ್ಪತ್ತಿ ನಾಶಗಳನ್ನು ಹೊಂದಬೇಕಾಗುವುದು. ಅದೂ ಅಲ್ಲದೇ ಈ ಓವೀಯಲ್ಲಿ, ನಿತ್ಯ ಚಲಿಸುತ್ತಿರುವ ಈ ಗ್ರಹ ಗೋಳಗಳು ವಿಕಾರವಾಗುತ್ತಿವೆ ಎನ್ನುವುದು ಸ್ವಾಭಾವಿಕವಾಗಿರುತ್ತದೆ. ವಿಕಾರವಾಗುತ್ತಿರುವ ಯಾವುದೇ ವಸ್ತುವು ಉತ್ಪತ್ತಿ-ನಾಶಗಳನ್ನು ಹೊಂದುತ್ತದೆ ಎನ್ನುವ ಸಾಮಾನ್ಯ ನಿಯಮದಂತೆ ಈ ಗ್ರಹ ಗೋಳಗಳೂ ಕೂಡ ಉತ್ಪತ್ತಿ ನಾಶಗಳನ್ನು ಹೊಂದುತ್ತವೆ.

**ಓವೀ.26 :** ಈ ರೀತಿ ಇಡೀ ಬ್ರಹ್ಮಾಂಡವೇ ಉತ್ಪತ್ತಿ ನಾಶಗಳನ್ನು ಹೊಂದುತ್ತಿರುವ ಕಾರ್ಯಜಾತವೇ ಆಗಿದೆ. ಇದರ ಉತ್ಪತ್ತಿ ಪೂರ್ವದಲ್ಲಿ ಇದಕ್ಕಿರದ ಅಸ್ತಿತ್ವವು ನಂತರ ಬರುವುದರಿಂದ ಇದರ ಅಸ್ತಿತ್ವವು ಬೇರೆ ಮತ್ತೊಂದರಿಂದಲೇ ಬಂದಿರಬೇಕಾಗಿರುತ್ತದೆ.

**ವಿವರಣೆ :** ಈಗ ಇಡೀ ಬ್ರಹ್ಮಾಂಡವನ್ನೇ ವಿಕಾರವಾಗುತ್ತಿರುವ ಮತ್ತು ಉತ್ಪತ್ತಿ-ನಾಶಗಳನ್ನು ಹೊಂದುತ್ತಿರುವ ಕಾರ್ಯಜಾತವೆಂದು ತೆಗೆದುಕೊಳ್ಳಲಾಗಿದೆ. ಈ ಬ್ರಹ್ಮಾಂಡದ ಉತ್ಪತ್ತಿ-ಪೂರ್ವದಲ್ಲಿ, ಇದು ಅಸ್ತಿತ್ವದಲ್ಲಿರಲಿಲ್ಲವೆಂಬುದು ತಿಳಿದೇ ಇರುತ್ತದೆ. ಹಾಗಾದರೆ ಮೊದಲು ಅದಕ್ಕಿರದ ಅಸ್ತಿತ್ವವು ನಂತರ ಹೇಗೆ ಬರಲು ಸಾಧ್ಯ? ಆದುದರಿಂದ ಅದಕ್ಕೆ ಮತ್ತೊಂದರಿಂದ ಅಸ್ತಿತ್ವವು ಬರಲೇಬೇಕಾಗುತ್ತದೆ.

ತೋರುವ ಹಾವು ಮೊದಲಿರದೇ, ಜ್ಞಾನಾನಂತರವೂ ಇರದೇ, ಮಧ್ಯಕಾಲದಲ್ಲಿ ಮಾತ್ರ ಇದ್ದಂತೆ ತೋರುತ್ತದೆ. ಆಗ ಅದು ಹೇಗೆ ಹಗ್ಗದ ಅಸ್ತಿತ್ವವನ್ನು ಎರವಲು ಪಡೆದಂತೆ ತೋರವುದೋ ಹಾಗೆಯೇ ನಿತ್ಯ ಅಸ್ತಿತ್ವದಲ್ಲಿರುವ ತತ್ತ್ವವೊಂದರ ಅಸ್ತಿತ್ವವನ್ನು ಎರವಲು ಪಡೆದು ಬ್ರಹ್ಮಾಂಡವು ತೋರುತ್ತದೆ.

ಓವೀ.27 : ಬ್ರಹ್ಮಾಂಡದ ಉತ್ಪತ್ತಿ ಪೂರ್ವದ ಹಾಗು ನಾಶಾನಂತರದ ಇಲ್ಲದಿರುವಿಕೆಯನ್ನು ವಿವರಿಸಲು ಮತ್ತು ಇರುವಾಗ ಅದರ ಅಸ್ತಿತ್ವವು ಎಲ್ಲಿಂದ ಬಂದಿದೆ ಎಂದು ತಿಳಿಯಲು ಅನ್ಯ ಸದ್-ವಸ್ತುವಿನ ಅವಶ್ಯಕತೆ ಇರುತ್ತದೆ. ಇಲ್ಲದಿದ್ದರೆ ಇದನ್ನು ಬೇರೆ ರೀತಿಯಲ್ಲಿ ವಿವರಿಸಲು ಸಾಧ್ಯವಿಲ್ಲ.

ವಿವರಣೆ : "ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ..." ( ಭ.ಗೀತಾ II.16 ) ಎಂಬ ಭಗವದ್ಗೀತೆಯ ಉಕ್ತಿಯಂತೆ ಅಸದ್ವಸ್ತುವಿಗೆ ಅಸ್ತಿತ್ವವಿಲ್ಲ; ಸದ್ವಸ್ತುವಿಗೆ ನಾಶವಿಲ್ಲ. ಬ್ರಹ್ಮಾಂಡಕ್ಕೆ ಉತ್ಪತ್ತಿ ಪೂರ್ವದಲ್ಲಿ ಅಸ್ತಿತ್ವವು ಇರದೇ ಅದು ಅಸದ್ವಸ್ತುವಾಗಿತ್ತು. ಆದುದರಿಂದ ಆದಕ್ಕೆ ನಿಜವಾದ ಅಸ್ತಿತ್ವವು ಇರುವಂತಿಲ್ಲ. ಹಾಗೆಯೇ ಅದು ಇರುವಾಗ ಇದ್ದಂತೆ ಕಂಡರೂ ಅದು ನಿಜವಾದ ಅಸ್ತಿತ್ವವಲ್ಲ. ಏಕೆಂದರೆ ಅದು ನಾಶವಾಗುವುದನ್ನು ನೋಡುತ್ತೇವೆ. ಆದುದರಿಂದ ನಿಜವಾದ ಅಸ್ತಿತ್ವವು ಎಂದೂ ನಾಶವಾಗದು. ಹಾಗೆಯೇ ಅಸತ್ ವಸ್ತುವಿಗೆ ಎಂದೂ ಅಸ್ತಿತ್ವ ಬರುವುದಿಲ್ಲ. ಆದುದರಿಂದ ಬ್ರಹ್ಮಾಂಡದ ತೋರುವ ಅನಿತ್ಯ ಅಸ್ತಿತ್ವವನ್ನು ಅದು ನಿತ್ಯ ಅಸ್ತಿತ್ವವಿರುವ ಮತ್ತೊಂದು ವಸ್ತುವಿನ ಅಸ್ತಿತ್ವದಿಂದ ಎರವಲು ಪಡೆದಿರಲೇಬೇಕು ಎಂದು ತಿಳಿಯುತ್ತದೆ. ಇದನ್ನು ಬೇರೆ ರೀತಿಯಲ್ಲಿ ವಿವರಿಸಲು ಸಾಧ್ಯವಿಲ್ಲ.

ಓವೀ.28 : ಈ ಸದ್ ವಸ್ತುವು ಜಗತ್ತಿನ ಉತ್ಪತ್ತಿಯ ಪೂರ್ವದಲ್ಲೂ, ಜಗತ್ತು ಇರುವಾಗ ಜಗತ್ತಿನ ರೂಪದಲ್ಲೂ ಮತ್ತು ಜಗತ್ತು ನಾಶವಾದ ಮೇಲೂ ಇರುತ್ತದೆ.

ವಿವರಣೆ: 'ಸದ್ ವಸ್ತುವಿಗೆ ನಾಶವಿಲ್ಲ' ಎಂಬುದನ್ನು ಹಿಂದಿನ ಓವೀಯಲ್ಲಿ ತಿಳಿಸಿದ್ದನ್ನು ಇಲ್ಲಿ ವಿಸ್ತರಿಸಿ ಹೇಳಲಾಗಿದೆ. ಇರುವಿಕೆಯು (ಸತ್ ಸ್ವರೂಪವು) ನಿರಂತರವು ಹಾಗು ಅಖಂಡವೂ ಆಗಿರುವುದು. ದೇಹಾದಿ ಜಗತ್ತಿಗೆ ಇರುವ ತಾತ್ಕಾಲಿಕ ಇರುವು ಆ ಸತ್ ಸ್ವರೂಪದ ತೋರಿಕೆಯೇ ಇರುತ್ತದೆ. ಅಜ್ಞಾನದಿಂದ ಈ ತೋರಿಕೆಯು ನಾಮರೂಪಾತ್ಮಕವಾಗಿದ್ದು ಅದು ವೈವಿಧ್ಯಮಯವಾದ ಜಗತ್ತಿನ ಅಸ್ತಿತ್ವಕ್ಕೆ ಕಾರಣವಾಗಿರುತ್ತದೆ. ಈ ಜಗತ್ತಿನ ಉತ್ಪತ್ತಿಪೂರ್ವದಲ್ಲಿ ಹಾಗು ಅದರ ನಾಶಾನಂತರ ಈ ನಾಮ ರೂಪಗಳು ನಾಶವಾಗಿ ಕೇವಲ ಸತ್ ಸ್ವರೂಪವು ಉಳಿಯುತ್ತದೆ. ಆದುದರಿಂದ ಈ ಸತ್ ಸ್ವರೂಪವು ಅದ್ವಯವೂ ಮತ್ತು ಅಖಂಡವೂ ಆಗಿದ್ದು ಈ ಜಗತ್ತಿನ ಉತ್ಪತ್ತಿ ಪೂರ್ವದಲ್ಲೂ, ಜಗತ್ತು ತೋರುವಾಗಲೂ ಹಾಗು ಜಗತ್ತು ನಾಶವಾದಾಗಲೂ ತಾನೇ ತಾನಾಗಿ ಇರುತ್ತದೆ.

**ಓವೀ.29** : ಬ್ರಹ್ಮಾಂಡದಲ್ಲಿ ನಾಮ ರೂಪಾತ್ಮಕ ವಸ್ತುಗಳೆಲ್ಲ ನಾಶವಾದಾಗ ಕೇವಲ ಆಕಾಶ ಮಾತ್ರ ಉಳಿಯುತ್ತದೆ. ಈ ಆಕಾಶವೂ ಅಜ್ಞಾನಾವಸ್ಥೆಯಲ್ಲಿ ನಾಶವಾಗುತ್ತದೆ.

ವಿವರಣೆ : ಪ್ರಳಯಕಾಲದಲ್ಲಿ ಪೃಥ್ವಿಯು ಜಲದಲ್ಲಿ, ಜಲವು ತೇಜದಲ್ಲಿ, ತೇಜವು ವಾಯುವಿನಲ್ಲಿ ಹಾಗೂ ವಾಯುವು ಆಕಾಶದಲ್ಲಿ ಲಯ ಹೊಂದುತ್ತವೆ. ಈ ಲಯ ಪ್ರಕ್ರಿಯೆಯಲ್ಲಿ ಎಲ್ಲ ನಾಮ ರೂಪಗಳೂ ನಾಶವಾಗಿ ಕೇವಲ ಆಕಾಶವು ಮಾತ್ರ ಉಳಿಯುತ್ತದೆ. ಈ ಆಕಾಶಕ್ಕೆ ಉಳಿದ ಭೂತಗಳ ಅಪೇಕ್ಷೆಯ ಮೇರೆಗೆ ಅಸ್ತಿತ್ವವು ಸಿದ್ಧವಾಗುತ್ತದೆ. ಹೀಗೆ ಇದರ ಸಾಪೇಕ್ಷ ಅಸ್ತಿತ್ವವನ್ನು ಮರೆತು ಅಜ್ಞಾನದಿಂದ ಇದಕ್ಕೆ ಸ್ವತಂತ್ರವಾದ ಅಸ್ತಿತ್ವವು ಆರೋಪಿಸಲ್ಪಟ್ಟಿದೆ. ಆದುದರಿಂದ ಅಜ್ಞಾನವೇ ಈ ನಾಮ ರೂಪಾತ್ಮಕ ಬ್ರಹ್ಮಾಂಡಕ್ಕೆ ಕಾರಣವಾಗುತ್ತದೆ. ಸುಷುಪ್ತಿ, ಮೂರ್ಛೆ ಹಾಗೂ ಈ ರೀತಿಯ ಅವಸ್ಥೆಗಳಲ್ಲಿ ಅಜ್ಞಾನವು ಮಾತ್ರ ಉಳಿಯುತ್ತದೆ ಮತ್ತು ಆಕಾಶವು ನಾಶವಾಗುತ್ತದೆ.

**ಓವೀ.30** : ಸುಷುಪ್ತಿಯಲ್ಲಿ ಅಜ್ಞಾನವಿದ್ದರೂ ಅಸ್ತಿತ್ವವು ನಾಶವಾಗಿರುವುದಿಲ್ಲ. ಈ ಅಸ್ತಿತ್ವದ ಜ್ಞಾನದಿಂದ ಅಜ್ಞಾನವು ನಾಶವಾಗುತ್ತದೆ. ಈ ಸಾಪೇಕ್ಷವಾದ ಜ್ಞಾನವೂ ನಾಶವಾಗಿ ಕೇವಲ ಅಸ್ತಿತ್ವವು ಅಂದರೆ ಸತ್ ಸ್ವರೂಪವು ತಾನೇ ತಾನಾಗಿ ಉಳಿಯುತ್ತದೆ.

ವಿವರಣೆ : ಈ ಓವೀಯಲ್ಲಿ ಸತ್ ಸ್ವರೂಪವು ನಿತ್ಯವೆಂದು ತೋರಿಸಲಾಗಿದೆ. ಹಿಂದಿನ ಓವೀಯಲ್ಲಿ ಲಯ ಪ್ರಕ್ರಿಯೆಯನ್ನು ಪ್ರಾರಂಭಿಸಿ ನಾಮ-ರೂಪಗಳು ಆಕಾಶದಲ್ಲೂ, ಆಕಾಶವು ಅಜ್ಞಾನದಲ್ಲೂ ಲಯವಾಗುವುದನ್ನು ತಿಳಿಸಲಾಗಿದೆ. ಈ ಓವೀಯಲ್ಲಿ ಈ ಲಯ ಪ್ರಕ್ರಿಯೆಯನ್ನು ಮುಂದುವರಿಸಲಾಗಿದೆ.

ಸುಷುಪ್ತಿಯಲ್ಲಿ ಯಾವುದೇ ಇರುವಿಕೆಯ ಅನುಭವವು ಆಗುವುದಿಲ್ಲ. ಎದ್ದ ನಂತರ 'ಏನೂ ತಿಳಿಯಲಿಲ್ಲ' ವೆಂದು 'ತಿಳಿಯದಿರುವಿಕೆ' ಯನ್ನು ಅಂದರೆ ಅಜ್ಞಾನದ ಇರುವಿಕೆಯು ತಿಳಿಯುತ್ತದೆ. ಇಂದ್ರಿಯಾದಿ ಸಕಲ ಕರಣಗಳೂ ಅಲ್ಲಿ ಸುಪ್ತವಾಗಿರುವುದರಿಂದ ಸಕಲ ಜೀವ-ಜಗತ್ತುಗಳು ಇರದೇ ಅಜ್ಞಾನದ ( ಕಾರಣದೇಹದ ) ಅನುಭವವು ಆಗುವುದು. ಈ ಅವಸ್ಥೆಯಲ್ಲಿ ಏನು ಇರುವುದಿಲ್ಲವೆಂದು ಹೇಳುವುದು ತಪ್ಪಾಗುತ್ತದೆ. ಏಕೆಂದರೆ ಅದು ಒಂದು ಸುಖದ ಅನುಭವವೆಂದು ಎಲ್ಲರಿಗೂ ಸ್ಮರಣೆಯು ಬರುತ್ತದೆ. ಹಾಗಾದರೆ ಈ ಅನುಭವವು ಯಾರ ಅನುಭವವಾಗಿರುತ್ತದೆ ? ನಿಶ್ಚಯವಾಗಿಯೂ ಇದು ನನ್ನ ಅನುಭವವೇ ಆಗಿರುತ್ತದೆ. ಆದರೆ ಅಲ್ಲಿ ನನ್ನ ನಾಮ-ರೂಪಗಳನ್ನು ಕಳೆದುಕೊಂಡು ಶುದ್ಧವಾದ ಪ್ರತ್ಯಗಾತ್ಮನದೇ ಈ ಅನುಭವವಾಗಿರುತ್ತದೆ. ಅಲ್ಲಿ ಅನುಭವಿಸುವವನು-ಅನುಭವ-ಅನುಭವಿಸಲ್ಪಟ್ಟಿದ್ದು ಎಂಬ ತ್ರಿಪುಟಿಯು ಇರದೇ

ಆತ್ಮನು ಶುದ್ಧ ಅನಂದಾನುಭವ ಸ್ವರೂಪನೇ ಆಗಿರುತ್ತಾನೆ. ಈ ಶುದ್ಧ ಸತ್-ಚಿತ್-ಆನಂದ ಸ್ವರೂಪವೇ ನಿತ್ಯವಿರುತ್ತಿದ್ದು ಜೀವ-ಜಗತ್ತುಗಳ ಅಸ್ತಿತ್ವವೇ ಇದಾಗಿರುತ್ತದೆ. ಜಗತ್ತಿಗೇ ಆಧಾರವಾದ ಇದನ್ನೇ ಬ್ರಹ್ಮನೆಂದೂ ಅಥವಾ ಆತ್ಮನೆಂದೂ ಕರೆಯುತ್ತಾರೆ. ಇದರ ಜ್ಞಾನವಾದಾಗ ಸುಷುಪ್ತಿಯಲ್ಲಿದ್ದ ಅಜ್ಞಾನವು ಈ ಜ್ಞಾನದಿಂದ ನಾಶವಾಗುತ್ತದೆ. ಹೀಗೆ ಈ ಬ್ರಹ್ಮಾಂಡದ ಸೃಷ್ಟಿಗೆ ಪೂರ್ವದಲ್ಲಿ ಇದೇ ಅದ್ವಯ ಶುದ್ಧ ಬ್ರಹ್ಮವು ಇರುತ್ತದೆ. ಇದೇ ಬ್ರಹ್ಮವೇ ಬ್ರಹ್ಮಾಂಡದ ಸ್ಥಿತಿಗೆ ಕಾರಣವಾಗಿರುತ್ತದೆ. ಹಾಗೆಯೇ ಬ್ರಹ್ಮಾಂಡದ ನಾಶವು ಆದನಂತರವೂ ಇದೇ ಬ್ರಹ್ಮವು ತಾನೇ ತಾನಾಗಿರುತ್ತದೆ. ಈ ಬ್ರಹ್ಮನೇ ಆತ್ಮನಾಗಿದ್ದಾನೆ ( "ಅಯಂ ಆತ್ಮಾ ಬ್ರಹ್ಮ" – ಮಾಂಡೂಕ್ಯೋಪನಿಷತ್ – ಶ್ಲೋಕ.2 ). ಆದರೆ ಈ ಆತ್ಮನಿಗೆ ನಾಲ್ಕು ಅವಸ್ಥೆಗಳಿವೆ ( "ಸೋಽಯಂ ಆತ್ಮಾ ಚತುಷ್ಪಾತ್" – ಮಾಂಡೂಕ್ಯೋಪನಿಷತ್ – ಶ್ಲೋಕ.2). ಅಂದರೆ ಆತ್ಮನು ಜಾಗ್ರತ-ಸ್ವಪ್ನ-ಸುಷುಪ್ತಿ-ತುರೀಯಗಳೆಂಬ ನಾಲ್ಕು ಅವಸ್ಥೆಗಳಲ್ಲಿ ಇರುತ್ತಾನೆ. ಆತ್ಮನು ಸ್ಥೂಲ-ಸೂಕ್ಷ್ಮ-ಕಾರಣ ದೇಹಗಳನ್ನು ಹೊಂದಿ, ಜಾಗ್ರತದಲ್ಲಿರುವ ಸ್ಥೂಲ ಜಗತ್ತು ಸ್ವಪ್ನದಲ್ಲಿ ಸೂಕ್ಷ್ಮವಾಗಿ, ಸುಷುಪ್ತಿಯಲ್ಲಿ ಲಯ ಹೊಂದಿ ಅಜ್ಞಾನಾಕಾರವಾಗುತ್ತದೆ. ನಾಲ್ಕನೆಯದಾದ ತುರೀಯದಲ್ಲಿ ಆತ್ಮನು ನಿತ್ಯ ಸಾಕ್ಷಿಯಾಗಿ, ಬ್ರಹ್ಮಾಂಡದ ಉತ್ಪತ್ತಿ-ನಾಶಗಳನ್ನು ನೋಡುತ್ತಿರುತ್ತಾನೆ. 'ಜೀವ' ನಿಗೆ ಈ ಸಾಕ್ಷೀ ಜ್ಞಾನವು ಬಂದಕೂಡಲೇ ತಾನು ಬ್ರಹ್ಮನಿದ್ದೇನೆ, ತನ್ನ ಅಧಿಷ್ಠಾನದಲ್ಲಿಯೇ ಸತ್ಯತ್ವವಿಲ್ಲದ ಈ ಜೀವ ಜಗತ್ತುಗಳು ತನಗೆ ತೋರಿ ನಾಶವಾಗುತ್ತಿದ್ದಾವೆ ಎಂಬ ಜ್ಞಾನವು ಉಂಟಾಗುತ್ತದೆ. ಹೀಗೆ "ನಾನು ಬ್ರಹ್ಮನಿದ್ದೇನೆ" ಎಂಬ ಜ್ಞಾನದಿಂದ ಅಜ್ಞಾನವು ಸಂಪೂರ್ಣ ನಾಶವಾಗಿ ಸಕಲವೂ ಅಸತ್ ಆಗಿ ಕಾಣುತ್ತದೆ.

ಈ ಜ್ಞಾನವು ಶುದ್ಧ ಸಾತ್ವಿಕ ಬುದ್ಧಿವೃತ್ತಿಯಾಗಿದ್ದು ಇದು ಅಸತ್ಯವಾದ ಬ್ರಹ್ಮಾಂಡದ ಅಪೇಕ್ಷೆಯ ಮೇರೆಗೆ ಇರುತ್ತದೆ. ಅಂದರೆ ಬ್ರಹ್ಮಾಂಡವೇ ಈ ವೃತ್ತಿಗೆ ವಿಷಯವಾಗಿರುತ್ತದೆ. ಬ್ರಹ್ಮಜ್ಞಾನಿಗೆ ಈ ವೃತ್ತಿಯಿಂದ ಬ್ರಹ್ಮಾಂಡದ ಅಸತ್ಯತೆಯ ಜ್ಞಾನವಾಗುತ್ತದೆ. ಬ್ರಹ್ಮಜ್ಞಾನಿಗೆ ಕ್ರಮೇಣ ಅಸತ್ಯವಾದ ಜಗತ್ತಿನ ಕಡೆಗೆ ಗಮನ ಹೋಗದೇ ಸಂಪೂರ್ಣವಾಗಿ ಬ್ರಹ್ಮನಲ್ಲೇ ಗಮನ ಉಳಿದಾಗ ತೋರುವ ಜಗತ್ತೂ ಮಾಯವಾಗುತ್ತದೆ ಮತ್ತು ಇದರ ಜೊತೆಗೆ ಈ ಜ್ಞಾನವೃತ್ತಿಯೂ ನಾಶವಾಗುತ್ತದೆ. ಹೇಗೆ ಕತ್ತಲೆಯಲ್ಲಿ ಕಣ್ಣು ನಿರುಪಯೋಗವೋ ಹಾಗೆ ಬುದ್ಧಿಗೆ ವಿಷಯವೇ ಇಲ್ಲದಾಗ ಈ ಜ್ಞಾನವೃತ್ತಿಯೂ ನಾಶವಾಗುತ್ತದೆ. ನಂತರ ಸಂಪೂರ್ಣ ಜಡ ಉಪಾಧಿಯು ಮಾಯವಾಗಿ ಶುದ್ಧ ಸಚ್ಚಿದಾನಂದ ಸ್ವರೂಪವು ತಾನೇ ತಾನಾಗಿ ಉಳಿಯುತ್ತದೆ. ಅದು ಅದ್ವಯ ತತ್ತ್ವವಾಗಿರುವುದರಿಂದ ಅವರ್ಣನೀಯವಾಗಿರುತ್ತದೆ.

ಓವೀ.31: ತಾನೇ ತಾನಾಗಿರುವ ಅದ್ವಯ ಸಚ್ಚಿದಾನಂದ ಸ್ವರೂಪಕ್ಕೆ ಎರಡನೆಯದೆಂಬುದು ಇರುವುದಿಲ್ಲ. ಅದು ನಿಶ್ಚಯವಾಗಿಯೂ ಅವಿನಾಶಿಯಾಗಿರುತ್ತದೆ.

ವಿವರಣೆ : ಇಡೀ ಬ್ರಹ್ಮಾಂಡದ ಅಧಿಷ್ಠಾನವಾಗಿರುವ ಸಚ್ಚಿದಾನಂದ ಸ್ವರೂಪವು ಅದ್ವಯ ತತ್ತ್ವವಾಗಿರುತ್ತದೆ. ಇಡೀ ಬ್ರಹ್ಮಾಂಡವೇ ಅಸತ್ ಸ್ವರೂಪವಾಗಿರುವುದರಿಂದ 'ನಿತ್ಯ ಇರುವು' ( ಸತ್ ಸ್ವರೂಪ ) ಇರುವ ಈ ಬ್ರಹ್ಮಸ್ವರೂಪವು ಎರಡಿಲ್ಲದೇ ಏಕೈಕವಾಗಿರುತ್ತದೆ. ಇದಕ್ಕಿಂತ ಭಿನ್ನವಾಗಿ ಬೇರೊಂದು ತತ್ತ್ವವಿದ್ದಿದ್ದರೆ ಅದು ಸತ್ ಸ್ವರೂಪಕ್ಕಿಂತ ಭಿನ್ನವಾಗಿರಬೇಕಾಗುತ್ತದೆ. ಅಂದರೆ ಅದಕ್ಕೆ ಅಸ್ತಿತ್ವವು ಇರಬಾರದು. ಆದರೆ ಅಂತಹ ಇನ್ನೊಂದು ತತ್ತ್ವವನ್ನು ಕಲ್ಪನೆ ಮಾಡಲೂ ಬರುವುದಿಲ್ಲ. ಅದು ಜಡವಾಗಿದ್ದರೆ ಅದು ಬ್ರಹ್ಮಾಂಡದ ಭಾಗವಾಗುತ್ತದೆ. ಹಾಗಿರದೇ ಅದು ಇನ್ನೊಂದು ಚೈತನ್ಯವಾಗಿರುವಂತಿಲ್ಲ. ಏಕೆಂದರೆ ಚೈತನ್ಯದಲ್ಲಿ ಅನೇಕತೆ ಇರುವಂತಿಲ್ಲ. ಅನೇಕತೆಯು ಜಡವಸ್ತುಗಳಿಗಷ್ಟೇ ಸೀಮಿತವಾಗಿರುತ್ತದೆ. ಏಕೆಂದರೆ ಇನ್ನೊಂದು ಚೈತನ್ಯವಿದ್ದ ಪಕ್ಷದಲ್ಲಿ ಅದನ್ನು ತಿಳಿಯದೇ ಅದರ ಬಗ್ಗೆ ಮಾತನಾಡಲೂ ಸಾಧ್ಯವಿಲ್ಲ. ಆದರೆ ಅದನ್ನು ತಿಳಿದಕೂಡಲೇ ಅದು ಜಡವೆಂದು ಅರಿವಾಗುತ್ತದೆ. ಆದುದರಿಂದ ಜಡದ ಅನೇಕತೆಯನ್ನು ತಿಳಿಯುವುದು ಏಕೈಕ ಚೈತನ್ಯ ( ಬ್ರಹ್ಮ ) ವಾಗಿರಲೇಬೇಕು. ಹೀಗೆ ಅದ್ವಯ ತತ್ತ್ವವಾಗಿರುವ ಬ್ರಹ್ಮವು ಅವಿನಾಶಿಯು. ಅದನ್ನು ನಾಶ ಮಾಡಲು ಇನ್ನೊಂದು ವಸ್ತುವು ಇರುವುದಿಲ್ಲ ನಾಮ ರೂಪಗಳು ನಾಶವಾಗಬಹುದೇ ಹೊರತು ಶುದ್ಧ ಇರುವನ್ನಲ್ಲ (ಅಸ್ತಿತ್ವವನ್ನಲ್ಲ ) ಮತ್ತು ತನಗೆ ತಾನು ನಾಶ ಮಾಡಿಕೊಳ್ಳಲಾಗುವುದಿಲ್ಲ. ಏಕೆಂದರೆ ನಾಶವಾಗಿದೆ ಅಥವಾ ಇಲ್ಲ ಎಂದು ಹೇಳಲು ಚೈತನ್ಯ ಸ್ವರೂಪನೇ ಬೇಕಾಗುತ್ತದೆ. ಇದು ಸ್ವಯಂ ಸಿದ್ಧವಾದ ಚೈತನ್ಯವಾಗಿದೆ. ಅದನ್ನು ಇಲ್ಲವೆಂದು ಅನುಮಾನಿಸಲೂ ಕೂಡ ಅದು ಇರಲೇಬೇಕಾಗುತ್ತದೆ. ಆದುದರಿಂದ ಆತ್ಮವು ಅವಿನಾಶಿಯಾಗಿರುತ್ತದೆ.

ಓವೀ.32 : ತ್ರಿಕಾಲದಲ್ಲಿರುವ ಸತ್ ಸ್ವರೂಪವು ಕಾಲಕ್ಕೂ ಅಸ್ತಿತ್ವವನ್ನು ಕೊಡುವುದರಿಂದ ಕಾಲದಿಂದಲೂ ಅದು ಅಬಾಧಿತವಾಗಿರುತ್ತದೆ.

ವಿವರಣೆ : ಸಕಲವೂ ಕಾಲದಲ್ಲಿ ಉತ್ಪತ್ತಿ ನಾಶಗಳನ್ನು ಪಡೆಯುತ್ತವೆ. ಅಂದರೆ ಅವು ಕಾಲದಿಂದ ಬಾಧಿತವಾಗುತ್ತವೆ. ಬ್ರಹ್ಮವು ಅಂದರೆ ಸತ್ ಸ್ವರೂಪವು. ಅದು ತ್ರಿಕಾಲದಲ್ಲೂ ಇರುವಂತಹುದು. ಅದಕ್ಕೆ ಉತ್ಪತ್ತಿ ನಾಶಗಳಿಲ್ಲ. ಅದು ಸಕಲ ವಸ್ತುಗಳ ( ಇಡೀ ಬ್ರಹ್ಮಾಂಡದ ) ಉತ್ಪತ್ತಿ ನಾಶಗಳಿಗೆ ಸಾಕ್ಷಿಯಾಗಿರುತ್ತದೆ. ಅದು ಕಾಲದಿಂದ ಬಾಧಿತಗೊಳ್ಳುವುದು ಸಾಧ್ಯವಿಲ್ಲ. ಏಕೆಂದರೆ ಸಕಲವಸ್ತುಗಳಿಗೂ ಹಾಗೂ ಕಾಲಕ್ಕೂ ಕೂಡ ಇದರಿಂದಲೇ ಅಸ್ತಿತ್ವವು ಬರಬೇಕಾಗಿರುತ್ತದೆ. ಕಾಲವು ನಮ್ಮ ಜಾಗ್ರತ-ಸ್ವಪ್ನಗಳಲ್ಲಿ ತೋರುತ್ತದೆ. ಈ ಅವಸ್ಥೆಗಳಿಗೆ ಅಸ್ತಿತ್ವವನ್ನು ಕೊಡುವುದೇ ಸತ್ ಸ್ವರೂಪವು. ಈ ಅವಸ್ಥೆಗಳಲ್ಲಿ ಕಾಲವು ಉತ್ಪತ್ತಿಯಾಗಿ ಆ ಅವಸ್ಥೆ ಬದಲಾದ ಕೂಡಲೇ ನಾಶವಾಗುವುದನ್ನು ಸತ್ ಸ್ವರೂಪವು ಸಾಕ್ಷಿಯಾಗಿ ನೋಡುತ್ತದೆ. ಹಾಗೆಯೇ ಈ ಅವಸ್ಥೆಯು ಬದಲಾವವಣೆಯಾದಾಗ ಕಾಲವೂ ಬದಲಾಯಿಸಿ ಅಲ್ಲಿ ಉತ್ಪತ್ತಿ ನಾಶಗಳನ್ನು ಪಡೆಯುತ್ತದೆ.

ಓವೀ.33 : ಎಲ್ಲ ವಸ್ತುಗಳನ್ನೂ ಕಾಲ ಪುರುಷನು ನುಂಗುವಂತೆ ಈ ಸದ್ವಸ್ತುವನ್ನೂ ಅವನು ಒಂದುವೇಳೆ ನುಂಗಬೇಕಾದರೆ ಅವನು ಸದ್ವಸ್ತುವಿನಿಂದ ಬೇರೆಯೇ ಇರಬೇಕಾಗುತ್ತದೆ. ಆಗ ಕಾಲಕ್ಕೆ ಅಸ್ತಿತ್ವವೇ ಇಲ್ಲದೇ ಇರಬೇಕಾಗುವುದು. ಇದು ಸಾಧ್ಯವಿಲ್ಲ.

ವಿವರಣೆ : ಎಲ್ಲ ವಸ್ತುಗಳು ಕಾಲದಲ್ಲೇ ಹುಟ್ಟಿ ಕಾಲದಲ್ಲೇ ನಾಶ ಹೊಂದುತ್ತವೆ. ಅಂದರೆ ಕಾಲ ಪುರುಷನು ಎಲ್ಲವನ್ನೂ ನುಂಗುತ್ತಾನೆ. ಒಂದುವೇಳೆ ಕಾಲನು ಸದ್ವಸ್ತುವನ್ನೂ ಕೂಡ ನುಂಗಬಹುದೆಂಬ ಅನುಮಾನವು ಹುಟ್ಟಬಹುದು. ಹಾಗಾಗಲು ಕಾಲನು ಸದ್ವಸ್ತುವಿಗಿಂತ ಬೇರೆಯೇ ಇರಬೇಕಾಗುತ್ತದೆ. ಹಾಗೆ ಸದ್ವಸ್ತುವಿಗಿಂತ ಕಾಲನು ಬೇರೆಯೇ ಇರಲು ಸಾಧ್ಯವಾದರೆ ಆಗ ಕಾಲಕ್ಕೆ ಅಸ್ತಿತ್ವವು ಇರಲು ಸಾಧ್ಯವಿಲ್ಲ. ಅಸ್ತಿತ್ವವಿರದ ಕಾಲವನ್ನು ನಾವು ಕಲ್ಪನೆಯನ್ನೂ ಮಾಡಲು ಸಾಧ್ಯವಿಲ್ಲ. ಆದುದರಿಂದ ಕಾಲನು ಸದ್ವಸ್ತುವನ್ನು ನುಂಗುವುದು ಅಸಾಧ್ಯವಾಗಿರುತ್ತದೆ. ಸದ್ವಸ್ತುವೇ ಕಾಲವನ್ನು ಸೃಷ್ಟಿಮಾಡಿ ಸಕಲ ವಸ್ತುಗಳಿಗೆ ಅಸ್ತಿತ್ವವನ್ನು ಕೊಡುತ್ತದೆ. ಅವಸ್ಥೆಗೆ ಕಟ್ಟುಬಿದ್ದ-ಕಾಲದ ಉತ್ಪತ್ತಿ-ನಾಶಗಳನ್ನೇ ಸಾಕ್ಷಿಯಾಗಿ ನೋಡುವುದೇ ಸದ್ವಸ್ತುವು.ಆದುದರಿಂದ ಕಾಲದ ಉತ್ಪತ್ತಿ ನಾಶಗಳಿಗೂ ಕಾರಣವಾದ ಈ ಸದ್ವಸ್ತುವು ಮಹಾಕಾಲನಾಗಿರುತ್ತಾನೆ.

ಓವೀ.34 : ಈ ರೀತಿ ಸದ್ರೂಪವೆಂಬುದು ಕಾಲಸ್ಪರ್ಷವಿಲ್ಲದ್ದು, ನಿರಪೇಕ್ಷವಾದುದು ಮತ್ತು ಎಲ್ಲದಕ್ಕಿಂತ ದೊಡ್ಡದು. ಇದಕ್ಕೆ ಗುರು ಎನ್ನುತ್ತಾರೆ.

ವಿವರಣೆ : ಕಾಲದ ಮಿತಿಗೆ ಒಳಪಟ್ಟು ನಾಶವಾಗುವಂತಹ ವಸ್ತುವು ಸದ್ರೂಪವಲ್ಲವೆಂದು ಹಿಂದಿನ ಓವೀಯಲ್ಲಿ ತಿಳಿಸಲಾಗಿದೆ. ಇಲ್ಲಿ ಸದ್ರೂಪದ ವ್ಯಾಖ್ಯೆಯನ್ನು ತಿಳಿಸಲಾಗಿದೆ. ಸದ್ರೂಪವು ಕಾಲದ ಹಾಗೂ ಕಾಲಕ್ಕೆ ಒಳಪಟ್ಟ ಸಕಲ ವಸ್ತುಗಳ ಉತ್ಪತ್ತಿ ನಾಶಗಳನ್ನು ನೋಡುವ ಸಾಕ್ಷಿಯಾಗಿರುತ್ತದೆ. ಆದುದರಿಂದ ಸದ್ರೂಪಕ್ಕೆ ಕಾಲದ ಸ್ಪರ್ಶವು ಇರುವಂತಿಲ್ಲ. ಸದ್ರೂಪವು ಅದ್ವಯತತ್ತ್ವವಾಗಿರುವುದರಿಂದ ಅದೊಂದೇ ಸ್ವತಂತ್ರವಾಗಿರಬಲ್ಲುದು. ಅಂದರೆ ಅದಕ್ಕೆ ಯಾವುದರ ಅಪೇಕ್ಷೆಯೂ ಇಲ್ಲದಿರುವುದರಿಂದ ಅದು ನಿರಪೇಕ್ಷ ತತ್ತ್ವವಾಗಿರುತ್ತದೆ. ಅಲ್ಲದೇ ಈ ಸದ್ರೂಪದಲ್ಲಿ ಉಳಿದ ಎಲ್ಲದರ ಅಸ್ತಿತ್ವವೇ ಅಧಿಷ್ಠಾನ ರೂಪದಲ್ಲಿ ಇರುವುದರಿಂದ ಇದೊಂದೇ ಸತ್ಯವಾಗಿರುವ ಅದ್ವಯ ತತ್ತ್ವವಾಗಿದೆ. ಆದುದರಿಂದ ಇದು ಎಲ್ಲದಕ್ಕಿಂತ ದೊಡ್ಡದಾಗಿರುತ್ತದೆ. ದೊಡ್ಡದಾಗಿರುವುದು ಎಂದರೆ 'ಗುರು' ಎಂದರ್ಥ. ಆದುದರಿಂದ ಈ ಸದ್ ರೂಪವೇ 'ಗುರು' ತತ್ತ್ವವಾಗಿದೆ. ಇದೇ ಅರ್ಥದಲ್ಲಿ ಶ್ರೀಗಳು 'ಗುರು' ಪದವನ್ನು ತಮ್ಮ ಕೃತಿಗಳಲ್ಲಿ ಬಳಸಿದ್ದಾರೆ.

**ಓವೀ.35 :** ಯಾವುದು ಎಲ್ಲದರ ಅಸ್ತಿತ್ವವಾಗಿರುವುದೋ ಅದೇ ದೊಡ್ಡ ಸತ್ತಾ ಸ್ವರೂಪವಾಗಿರುತ್ತದೆ. ಹಾಗೆಯೇ ಅದು ಇಲ್ಲದಿದ್ದರೆ ಸರ್ವವೂ ಮಿಥ್ಯಾರೂಪವೆಂದು ತಿಳಿಯಲ್ಪಡುತ್ತದೆ.

**ವಿವರಣೆ :** ಸದ್ರೂಪವೆಂದರೆ ಇರುವುದೆಲ್ಲವೂ ಅದೇ ಆಗಿರುತ್ತದೆ. ಅಂದರೆ ಎಲ್ಲದರ ಅಸ್ತಿತ್ವವೂ ಸದ್ರೂಪದ್ದೇ ( ಬ್ರಹ್ಮದ್ದೇ ) ಆಗಿರುತ್ತದೆ. ನೋಡಲಿಕ್ಕೆ ಕ್ಷಣಿಕ ಅಸ್ತಿತ್ವವನ್ನು ಹೊಂದಿರುವ ಜಗತ್ತಿನ ನಾಮ ರೂಪಗಳು ನಾಶವಾಗುವಂತಹುಗಳು ಆಗಿರುತ್ತವೆ. ಆದರೆ ಅವುಗಳ ಅಸ್ತಿತ್ವವು ನಿತ್ಯವಾಗಿಯೇ ಇದ್ದು ನಾಮ ರೂಪಗಳು ನಾಶವಾಗಿರುವುದರಿಂದ ರೂಪಾಂತರವಾಗಿ ಬೇರೆ ಬೇರೆ ಆಗಿ ಉಳಿಯುತ್ತವೆ. ಈ ಅರ್ಥದಲ್ಲೇ ಸದ್ರೂಪವು ಇರುವುದೆಲ್ಲವೂ ಆಗಿರುವುದರಿಂದ ಎಲ್ಲದಕ್ಕಿಂತ ದೊಡ್ಡದೂ ಆಗಿರುತ್ತದೆ. ಇದನ್ನೇ 'ಗುರು' ಎಂದು ಕರೆದಿದ್ದಾರೆ.

ಇದೇ ರೀತಿ ಸದ್ರೂಪವು ಇಲ್ಲದಿದ್ದರೆ ಸಕಲವೂ ಮಿಥ್ಯಾರೂಪವಾಗಿರುತ್ತದೆ. ಅಂದರೆ ಸಕಲವೂ ತನ್ನ ಸತ್ಯತ್ವವನ್ನು ಕಳೆದುಕೊಂಡುಬಿಡುತ್ತದೆ. ಬ್ರಹ್ಮಜ್ಞಾನವಿಲ್ಲದಾಗ ಅಭಿಮಾನದಿಂದ ಸಕಲವೂ ಸತ್ಯತ್ವವನ್ನು ಹೊಂದಿರುತ್ತದೆ. ಅಜ್ಞಾನದ ಕಾರ್ಯವಾದ ಈ ಅಭಿಮಾನವು ಜ್ಞಾನದಿಂದ ನಾಶವಾದಾಗ ಜಡ-ಚೈತನ್ಯಗಳು ಬೇರ್ಪಟ್ಟು ಸಕಲವೂ ಮಿಥ್ಯೆಯಾಗಿರುವುದು ತಿಳಿಯುತ್ತದೆ. ಜೀವನ್ಮುಕ್ತನಿಗೆ ಸಕಲವೂ ಮಿಥ್ಯೆಯೇ ಆಗಿರುತ್ತದೆ. ಹೀಗೆ ಯಾವ ಸದ್ರೂಪವು ಇರುವುದರಿಂದಲೇ ಸರ್ವವೂ ಇರುತ್ತದೋ ಮತ್ತು ಅದಿಲ್ಲದಿದ್ದರೆ ಎಲ್ಲವೂ ಮಿಥ್ಯೆಯಾಗುತ್ತದೋ ಅದನ್ನೇ ದೊಡ್ಡದೆಂದು ಕರೆಯಲಾಗಿದೆ.

**ಓವೀ.36 :** ಬ್ರಹ್ಮದ ಈ ದೊಡ್ಡತನದ ಇತಿ-ಮಿತಿಗಳನ್ನು ( ಪಾರ ) ಯಾರಿಗೂ ವರ್ಣಿಸಲು ಸಾಧ್ಯವಿಲ್ಲ. ಈ ಕಾರಣಕ್ಕಾಗಿಯೂ ಬ್ರಹ್ಮವನ್ನು ದೊಡ್ಡದೆಂದು ಹೇಳಬೇಕು.

**ವಿವರಣೆ :** 'ಗುರು' ತತ್ತ್ವವು ಹೇಗೆ ದೊಡ್ಡತನದಿಂದ ಕೂಡಿದೆ ಎಂಬುದನ್ನು ಹಿಂದಿನ ಓವೀಯಿಂದ ವಿವರಿಸಲಾಗುತ್ತಿದೆ. ಬ್ರಹ್ಮನನ್ನು ವಾಕ್-ಮನಗಳು ಮುಟ್ಟದೇ ತಿರುಗಿ ಬರುವುವು ( "ಯಥೋ ವಾಚೇ ನಿವರ್ತಂತೇ ತತ್ ಪ್ರಾಪ್ಯ ಮನಸಾ ಸಹ" - ). ಸಾಮಾನ್ಯವಾಗಿ ಅನುಭವಕ್ಕೆ ಬರುವ ಲೌಕಿಕ ವಸ್ತುಗಳನ್ನು ವರ್ಣಿಸುತ್ತೇವೆ. ಏಕೆಂದರೆ ಮನೋವೃತ್ತಿಯು ಆಯಾ ಪದಾರ್ಥದ ಆಕಾರವಾಗಿ ಆ ಪದಾರ್ಥವನ್ನು ತಿಳಿಯುವುದು ಸಾಧ್ಯವಿರುತ್ತದೆ. ಆದರೆ ಬ್ರಹ್ಮನ ವಿಷಯದಲ್ಲಿ ಇದು ಸಾಧ್ಯವಿಲ್ಲ. ಏಕೆಂದರೆ ವಾಕ್-ಮನಗಳಿಗೆ ಅಧಿಷ್ಠಾನವೇ ಬ್ರಹ್ಮನಾಗಿರುತ್ತಾನೆ. ಅಂದರೆ ಬ್ರಹ್ಮನು ವಾಕ್-ಮನಗಳನ್ನೇ ವಿಷಯ ಮಾಡಿಕೊಂಡು ಅವುಗಳನ್ನು ತಿಳಿಯುವವನು ಆಗಿರುತ್ತಾನೆ. ಹಾಗಾಗಿ ವಾಕ್ ಮನಗಳು ಅವನನ್ನು ತಿಳಿಯಲಾರವು. ಹೀಗೆ ಬ್ರಹ್ಮ ತತ್ತ್ವವು ನಮಗೆ ಅತೀತವಾಗಿದೆ. ಆದುದರಿಂದ ಅದು ಅವರ್ಣನೀಯ. ಅಂದರೆ ಬ್ರಹ್ಮನ ಇತಿ-ಮಿತಿಗಳನ್ನು ( ಪಾರ ) ತಿಳಿಯಲು ಅಸಾಧ್ಯ. ಈ ಕಾರಣಕ್ಕಾಗಿಯೂ ಬ್ರಹ್ಮವು ದೊಡ್ಡದು. ಬ್ರಹ್ಮವು ಅಪಾರವೆಂದು ಮುಂದಿನ ಓವೀಯಲ್ಲೂ ತಿಳಿಸಲಾಗಿದೆ. ಈ ಓವೀಯ ಕೊನೆಯ ಚರಣವನ್ನು ಮುಂದಿನ ಓವೀಯಲ್ಲಿ ವಿವರಿಸಲಾಗಿದೆ.

ಓವೀ.37 : ಪರಿಪೂರ್ಣ ಬ್ರಹ್ಮವು ಅಜ್ಞಾನದಲ್ಲಿ ತೋರುವ ದ್ವೈತ ಪ್ರಪಂಚವನ್ನೆಲ್ಲ ವ್ಯಾಪಿಸಿದೆ ಮತ್ತು ಅದಕ್ಕೆ ಅತೀತವೂ ಆಗಿದೆ. ಆದುದರಿಂದ ಪರಿಪೂರ್ಣ ಬ್ರಹ್ಮದ ದೊಡ್ಡತನವನ್ನು ವರ್ಣಿಸಲು ಸಾಧ್ಯವಿಲ್ಲ.

ವಿವರಣೆ : ಹಿಂದಿನ ಓವೀಯ ಕೊನೆಯ ಚರಣವನ್ನು ಈ ಓವೀಯಲ್ಲಿಯೇ ವಿವರಿಸಲಾಗಿದೆ. ಈ ಓವೀಯು ಹಿಂದಿನ ಓವೀಯ ವಿವರಣೆಯಂತಿದೆ. ನಮ್ಮ ಅಜ್ಞಾನದಲ್ಲಿ ತೋರುವ ಈ ದ್ವೈತ ಪ್ರಪಂಚಕ್ಕೆ ಬ್ರಹ್ಮವು ಅಧಿಷ್ಠಾನವಾಗಿದ್ದು ಅದು ಜಗತ್ತಿಗೆ ಅಸ್ತಿತ್ವವನ್ನು ಕೊಟ್ಟರೂ ಅದರ ನಾಮ ರೂಪಗಳನ್ನು ಸ್ಪರ್ಶ ಮಾಡದೇ ಅದಕ್ಕೆ ಅತೀತವಾಗಿರುವ ಬ್ರಹ್ಮನನ್ನು 'ಇಂತಹುದು' ಎಂದು ಹೇಳಲು ಬರದ ಈ ಪರಿಪೂರ್ಣ ಬ್ರಹ್ಮನ ದೊಡ್ಡತನದ ವರ್ಣನೆ ಸಾಧ್ಯವಿಲ್ಲ. "ಸೋಽಯಮಾತ್ಮಾ ಚತುಷ್ಪಾತ್" ಎಂಬ ಈ ಮಾಂಡೂಕ್ಯ ಶ್ರುತಿಯು ಆತ್ಮನ ನಾಲ್ಕು ಪಾದಗಳಲ್ಲಿ (ಅವಸ್ಥೆಗಳಲ್ಲಿ ) ಆತ್ಮನು, ಮೊದಲ ಮೂರು ಪಾದಗಳಲ್ಲಿರುವುದೆಲ್ಲವನ್ನೂ ( ಜಾಗ್ರತ, ಸ್ವಪ್ನ ಮತ್ತು ಸುಷುಪ್ತಿಗಳನ್ನು ) ವ್ಯಾಪಿಸಿ ನಾಲ್ಕನೆಯ ಪಾದದಲ್ಲಿ ತುರೀಯನಾಗುತ್ತಾನೆ ಎಂದು ತಿಳಿಸುತ್ತದೆ. ಅಂದರೆ ಅತೀತನಾಗುತ್ತಾನೆ ಎಂದರ್ಥ. ಪುರುಷಸೂಕ್ತದಲ್ಲಿಯೂ ಇದನ್ನೇ ಹೇಳಿದೆ. "ಪುರುಷ ಏವೇಽದಂ ಸರ್ವಂ..." ಅಂದರೆ ಇರುವುದೆಲ್ಲವೂ ಈ ಉತ್ತಮ ಪುರುಷನೇ. ಅಲ್ಲದೇ "ಸ ಭೂಮಿಮ್ ವಿಶ್ವತೋ ವೃತ್ವಾ ಅತ್ಯತಿಷ್ಠದ್ ದಶಾಂಗುಲಮ್" ಅಂದರೆ ಭೂಮಿ ಸಹಿತ ಇಡೀ ವಿಶ್ವವನ್ನೇ ವ್ಯಾಪಿಸಿದ್ದಲ್ಲದೇ ಅವನು ಇದೆಲ್ಲಕ್ಕಿಂತಲೂ ಅತೀತನಾಗಿದ್ದಾನೆ. ಹೀಗೆ ಅನಂತ ಕೋಟಿ ಬ್ರಹ್ಮಾಂಡ ನಾಯಕನಾಗಿರುವ ಈ ಬ್ರಹ್ಮನ ದೊಡ್ಡತನವನ್ನು ಮತ್ತು ಅವನ ಪರಿಪೂರ್ಣತೆಯನ್ನು ವರ್ಣಿಸಲು ಸಾಧ್ಯವಿಲ್ಲ. ಹೀಗೆ ದೊಡ್ಡದು ಯಾವುದೋ ಅವನೇ ಗುರುವಾಗಿದ್ದಾನೆ.

ಓವೀ.38 : ಇಂತಹ ಅವಯವರಹಿತವಾದ ಗುರುತತ್ತ್ವಕ್ಕೆ 'ಪಾದಗಳು' ಹೇಗೆ ಸಮಂಜಸವಾಗಿರುತ್ತವೆ? ಗುರುವಿನ ನಿರ್ಗುಣ-ನಿರಾಕಾರ ಸ್ವರೂಪಕ್ಕೆ ಪಾದಗಳನ್ನು ಕೇವಲ ಅಲಂಕಾರಕ್ಕಾಗಿ ತಿಳಿಸಲಾಗಿದೆ ಎಂದು ಬುದ್ಧಿವಂತರು ತಿಳಿದುಕೊಳ್ಳಬೇಕು.

ವಿವರಣೆ : ಮೊದಲನೆಯ ಓವೀಯಲ್ಲಿ "ಸದ್ಗುರುವಿನ ಪಾದಗಳಿಗೆ ನಮನವನ್ನು ಮಾಡಿ..." ಎಂದು ಪ್ರಾರಂಭಿಸಲಾಗಿತ್ತು. ಈ 'ಸದ್ಗುರು' ವಿನ ಸ್ವರೂಪವನ್ನು ಈ ವರೆಗೆ ತಿಳಿಸಿದ್ದಾಯಿತು.ಈಗ 'ಪಾದಗಳು' ಎಂಬ ಪದದ ಅರ್ಥವನ್ನು ಯಾವ ರೀತಿ ಮಾಡಲ್ಪಟ್ಟಿದೆ ಎಂಬುದನ್ನು ಶ್ರೀಗಳು ತಿಳಿಸುತ್ತಾರೆ. ಈ ವರೆಗೆ ಗುರುವೆಂದರೆ ದೊಡ್ಡದು. ಅದು ನಿರ್ಗುಣ-ನಿರಾಕಾರ ಅದ್ವಯ ಬ್ರಹ್ಮನೇ ( ಆತ್ಮನೇ ) ಎಂದು ತಿಳಿಸಿದ್ದಾಯಿತು. ಹೀಗೆ ಅವಯವರಹಿತವಾದ ಬ್ರಹ್ಮವೇ ಎಂದು ಸದ್ಗುರುವಿನ ಅರ್ಥವನ್ನು ಮಾಡಿದರೆ, ದೇಹದ ಅವಯವಗಳಾಗಿರುವ 'ಪಾದಗಳು' ಇಂತಹ ಸದ್ಗುರುವಿಗೆ ಹೊಂದುವುದಿಲ್ಲ. ಅದಕ್ಕಾಗಿ ಕೇವಲ ಅಲಂಕಾರಕ್ಕಾಗಿ ಮಾತ್ರ 'ಸದ್ಗುರುವಿನ ಪಾದಗಳಿಗೆ' ಎಂಬ ಪದಗಳು ಉಪಯೋಗಿಸಲ್ಪಟ್ಟಿವೆ ಎಂದು ತಿಳಿಸಲಾಗಿದೆ. ಅಂದರೆ ಲೌಕಿಕ ಗುರುಗಳ ವಿಷಯದಲ್ಲಿ ಅವರ ಪಾದಗಳಿಗೆ ಮುಖ್ಯವಾಗಿ 'ನಮನ' ವನ್ನು ಸಲ್ಲಿಸುವುದು ರೂಢಿ ಇರುವುದರಿಂದ ಬ್ರಹ್ಮ ಸ್ವರೂಪಿಯಾದ ಸದ್ಗುರುವಿಗೆ

ಪಾದಗಳಿಲ್ಲದಿದ್ದರೂ 'ನಮನ' ಮಾಡುವುದಕ್ಕಾಗಿ ಆಲಂಕಾರಿಕವಾಗಿ 'ಪಾದಗಳಿವೆ' ಎಂಬ ಅರ್ಥದಲ್ಲಿ ಉಪಯೋಗಿಸಲಾಗಿದೆ.

ಓವೀ.39 : ಸದ್ಗುರುವು ಅವಯವ ಸಹಿತನಾಗಿದ್ದ ಪಕ್ಷದಲ್ಲಿ ಘಟ-ಮಠಗಳಂತೆ ದೇಶ ಕಾಲಗಳಿಗೆ ಕಟ್ಟುಬಿದ್ದು ಅವನೂ ಪರಿಚ್ಛಿನ್ನನಾಗುತ್ತಾನೆ.

ವಿವರಣೆ : ಈ ಓವೀಯಲ್ಲಿ ಒಂದುವೇಳೆ ಸದ್ಗುರುವು ಅವಯವಗಳನ್ನು ಹೊಂದಿದ್ದಲ್ಲಿ, ಅಂದರೆ ದೇಹಧಾರಿಯಾಗಿದ್ದಲ್ಲಿ ಅವನು 'ಗುರು' ಪದಕ್ಕೆ ತಕ್ಕವನಾಗುವುದಿಲ್ಲವೆಂದು ತೋರಿಸಲಾಗಿದೆ. ಇಲ್ಲಿಯವರೆಗೆ ವಿವರಿಸಿದ ಗುರುವು ನಿರ್ಗುಣ, ನಿರಾಕಾರ, ಅದ್ವಯಸ್ವರೂಪ ಹಾಗೂ ಸದ್ರೂಪನಾಗಿದ್ದಾನೆ. ಇಡೀ ಬ್ರಹ್ಮಾಂಡಕ್ಕೆ ಅಸ್ತಿತ್ವವನ್ನು ಕೊಡುವ ಬ್ರಹ್ಮನು ಆಗಿದ್ದಾನೆ. ಇಂತಹ 'ಗುರುವಿನ' ಕಲ್ಪನೆಗೆ ದೇಹಧಾರಿಯಾದ ಗುರುವಿನ ಕಲ್ಪನೆ ವಿರೋಧವನ್ನುಂಟುಮಾಡುತ್ತದೆ. ದೇಹಧಾರಿಯಾದ ಗುರುವಿಗೆ ದೇಹದ ದರ್ಮವಾಗಿರುವ ಹಸಿವು, ಬಾಯಾರಿಕೆಗಳು ಅನಿವಾರ್ಯವಾಗಿವೆ. ದೇಹಕ್ಕೆ ರೋಗ ರುಜಿನಗಳೂ, ದೇಹವು ವಿಕಾರವಾಗುವುದು, ಸೊರಗುವುದು, ಹಾಗೂ ಸಾಯುವುದು, ಇತ್ಯಾದಿ ಕೂಡ ಅನಿವಾರ್ಯವೇ ಅಗಿರುತ್ತದೆ. ದೇಹಧಾರಿಯು ಏಕದೇಶೀಯನಾಗಿ ಯಾವುದೋ ಪ್ರದೇಶದಲ್ಲಿ ಹುಟ್ಟಿ ಯಾವುದೋ ಪ್ರದೇಶದಲ್ಲಿ ಸಾಯುತ್ತಾನೆ. ಅವನ ಹುಟ್ಟು ಸಾವುಗಳೂ ಕೂಡ ಕಾಲಕ್ಕೆ ಬದ್ಧವಾಗಿ ವಿವಿಧ ಕಾಲಗಳಲ್ಲಿ ನಡೆಯುತ್ತವೆ. ಘಟ-ಮಠಗಳಂತೆ ( ಜಡ ವಸ್ತುಗಳಂತೆ ) ದೇಶ ಕಾಲಗಳಿಗೆ ಬದ್ಧವಾಗಿರುವ ದೇಹಧಾರಿಯನ್ನು ಅಂದರೆ ಸಜಾತಿ-ವಿಜಾತಿ-ಸ್ವಗತ ಭೇದಗಳಿಂದ ಪರಿಚ್ಛಿನ್ನನಾದ ( ಭಿನ್ನ ಭಿನ್ನವಾದ ಅಸ್ತಿತ್ವವನ್ನು ಹೊಂದಿದ ) ಗುರುವಿಗೂ ದೇಶ ಕಾಲಾದಿ ಸರ್ವಕ್ಕೂ ಅಸ್ತಿತ್ವವನ್ನು ಕೊಡುವ ಸದ್ರೂಪವಾಗಿರುವ ಹಾಗೂ ಬ್ರಹ್ಮ ಸ್ವರೂಪವಾಗಿರುವ ಸದ್ಗುರುವಿಗೂ ಹೋಲಿಕೆಯೇ ಇರುವುದಿಲ್ಲ.

ಓವೀ.40 : ಅವಯವವಿರುವ ಗುರುರೂಪವು ಯಾವ ಅವಕಾಶದಲ್ಲಿರುತ್ತದೋ ಆ ಅವಕಾಶವು ಗುರುರೂಪಕ್ಕಿಂತ ದೊಡ್ಡದಾಗಿರುತ್ತದೆ. ಆದ್ದರಿಂದ ಸಾವಯವತ್ವವು ನಿಜವಾದ ಗುರುತ್ವಕ್ಕೆ ಯೋಗ್ಯವಾಗಿರುವುದಿಲ್ಲ.

ವಿವರಣೆ : ಗುರುವಿಗೆ ಪಾದಗಳು ಮುಂತಾದ ಅವಯವಗಳು ಇದ್ದರೆ ಅವನು ಪರಿಚ್ಛಿನ್ನನಾಗುತ್ತಾನೆ ಎಂದು ಹಿಂದಿನ ಓವೀಯಲ್ಲಿ ಹೇಳಲಾಗಿದೆ. ಈ ಓವೀಯಲ್ಲಿ ಅಂತಹವನು ಏಕದೇಶೀಯನಾಗಿ ಇರುವುದರಿಂದಲೂ ಗುರುತ್ವಕ್ಕೆ ಸಮರ್ಥನಾಗಿರುವುದಿಲ್ಲವೆಂದು ತೋರಿಸಲಾಗಿದೆ. ಇಲ್ಲಿ ಪಾದಗಳು, ಕೈಕಾಲು, ಮುಂತಾದ ಅವಯವಗಳು ಗುರುವಿಗೆ ಇದ್ದಲ್ಲಿ, ಈ ಭೌತಿಕ ಭಾಗಗಳೇ ಅವನ ದೇಹವಾಗುತ್ತವೆ. ಈ ದೇಹವು ದೇಶ ಕಾಲಗಳಲ್ಲಿ ಎಲ್ಲೋ ಒಂದು ಕಡೆ ಇರಲೇಬೇಕಾಗುತ್ತದೆ. ಒಂದು ಮನೆಯಲ್ಲಿ ಅಂತಹ ಗುರುವು ಇದ್ದಲ್ಲಿ ಆಗ ಆ ಮನೆಯೇ ಆ ಗುರುವಿಗೆ ಅವಕಾಶವನ್ನು

ಕೊಡುತ್ತದೆ. ಆಗ ಆ ಮನೆಯೇ ಅಂತಹ ಗುರುವಿಗಿಂತ ದೊಡ್ಡದಾಗಿರುತ್ತದೆ. ಅಂದರೆ ಆ ಮನೆಯ ಅಪೇಕ್ಷೆಯನ್ನು ಅವಲಂಬಿಸಿ ಗುರುವು ಇರಬೇಕಾಗುತ್ತದೆ. ಆದುದರಿಂದ ಗುರುವು ಇಲ್ಲಿ ನಿರಪೇಕ್ಷನಾಗದೇ ಸಾಪೇಕ್ಷನಾಗುತ್ತಾನೆ. 'ಗುರು' ಎಂದರೆ ಅತ್ಯಂತ ದೊಡ್ಡದಾಗಿರುವುದು ಎಂದರ್ಥ. ಅದಕ್ಕಿಂತ ದೊಡ್ಡದು ಯಾವುದೂ ಇರಬಾರದು. ಅವಯವಸಹಿತವಾಗಿರುವ ( ದೇಹಧಾರಿಯಾಗಿರುವ ) ಗುರುವಿಗಿಂತ ಅವನಿಗೆ ಆಶ್ರಯ ಕೊಟ್ಟ ಮನೆಯೇ ಇಲ್ಲಿ ದೊಡ್ಡದಾಗಿರುತ್ತದೆ. ಇಲ್ಲಿ 'ಗುರು' ವನ್ನು ಕೇವಲ ದೇಹದೃಷ್ಟಿಯಿಂದ ನೋಡಿದಾಗ ಅವನೂ ಕೂಡ ಉಳಿದ ಪರಿಚ್ಛಿನ್ನವಾದ ಜಡವಸ್ತುಗಳಂತೆ ನೋಡಲ್ಪಡುತ್ತಾನೆ. ಆದುದರಿಂದ ಪಾದಗಳುಳ್ಳ ಗುರುವು ನಿಜವಾದ ಗುರುತ್ವಕ್ಕೆ ಯೋಗ್ಯನಾಗಿರುವುದಿಲ್ಲ.

**ಓವೀ.41 :** ಆದುದರಿಂದ ನಿಜವಾದ ಗುರುವಿಗೆ ಅವಯವಗಳಿರುವುದಿಲ್ಲ. ಆದುದರಿಂದ ಅವರಿಗೆ ಪಾದಗಳಿರುವುದು ಅಸಂಭವ. ಆದರೆ 'ಪಾದಗಳಿಗೆ ನಮನ' ಎಂಬ ಪದ ಪ್ರಯೋಗವು ವಿನಯಾರ್ಥವಾಗಿದೆಯೆಂದು ತಿಳಿಯಬೇಕು.

**ವಿವರಣೆ :** ಸದ್ಗುರು ತತ್ತ್ವವು ನಿರ್ಗುಣ, ನಿರಾಕಾರ ಬ್ರಹ್ಮನಲ್ಲದೇ ಬೇರೆ ಅಲ್ಲವೆಂದು ತಿಳಿದಾಗ ಅಂತಹ ಗುರುವು ಪ್ರತ್ಯಗಾತ್ಮನೇ ಇದ್ದು ಅಂತರಾಳದಲ್ಲಿ ಅವನನ್ನು ಅಪರೋಕ್ಷವಾಗಿ ದರ್ಶನಮಾಡಬೇಕೇ ವಿನಃ ಇಂದ್ರಿಯಗಳಿಂದಲ್ಲ. ಆದುದರಿಂದ ಇಂತಹ ಗುರುವಿಗೆ ಅವಯವಗಳಿರುವಂತಿಲ್ಲ. ಹಾಗೆಯೇ ಪಾದಗಳಿರುವುದೂ ಅಸಂಭವವಾಗಿರುತ್ತದೆ. ಆದರೂ 'ಪಾದಗಳು' ಎನ್ನುವ ಪದಪ್ರಯೋಗವು ಅಲಂಕಾರಾರ್ಥವೆಂದು ಈ ಹಿಂದೆ ತಿಳಿಸಿಯಾಗಿದೆ. ಈ ಓವೀಯಲ್ಲಿ ಈ ಪದ ಪ್ರಯೋಗವು ವಿನಯಾರ್ಥಕವಾಗಿದೆ ಎಂದು ತಿಳಿಸಲಾಗಿದೆ. ಅಂದರೆ ಗುರುಗಳ ಪಾದಗಳಿಗೆ ಹಾಗೂ ಪಾದಧೂಳಿಗೆ ಗೌರವ ಸೂಚಿಸಲು ವಿನಯಪೂರ್ವಕವಾಗಿ ನಮಿಸುವುದು ರೂಢಿಯಲ್ಲಿರುವುದರಿಂದ ಇಲ್ಲಿಯೂ ಆ ಪದಪ್ರಯೋಗವಾಗಿದೆ. ಸಂನ್ಯಾಸಿಗಳಿಗೆ, ಸ್ವಾಮಿಗಳಿಗೆ ಮತ್ತು ಗುರುಗಳಿಗೆ 'ಮಹಾರಾಜ' ಎಂದು ನಾವು ಅದರ ಅರ್ಥ ತಿಳಿದೇ ಅಲಂಕಾರಾರ್ಥಕ ಮತ್ತು ಗೌರವಪೂರ್ವಾರ್ಥಕವಾಗಿ ಹೇಗೆ ಈ ಪದವನ್ನು ಪ್ರಯೋಗಿಸುತ್ತೇವೆಯೋ ಇಲ್ಲಿಯೂ ಹಾಗೆಯೇ ಇರುತ್ತದೆ.

**ಓವೀ.42 :** 'ಇಂದ್ರಪದಾರೂಢನಾದವನು" ಎಂದರೆ ಇಂದ್ರನ ಚರಣಗಳಲ್ಲಿ ಕುಳಿತುಕೊಳ್ಳುವವನು ಎಂಬ ಅರ್ಥವನ್ನು ಮಾಡದೇ "ಇಂದ್ರನೇ ಅವನಾದ" ಎಂಬ ಅರ್ಥವನ್ನು ಮಾಡುತ್ತೇವೆ.

**ವಿವರಣೆ :** 'ಪದ' ವೆಂಬ ಶಬ್ದಕ್ಕೆ ಕಾಲುಗಳು ಎಂದು ಅರ್ಥವನ್ನು ಮಾಡದೇ ಬೇರೆ ಅರ್ಥವೂ ಆ ಪದಕ್ಕಿದೆ ಎಂದು ತೋರಿಸಲು ಈ ಓವೀಯಲ್ಲಿ ಉದಾಹರಣೆಯೊಂದನ್ನು ಕೊಡಲಾಗಿದೆ. 'ಇಂದ್ರ ಪದವಿ ಸಿಕ್ಕಿತು' ಎಂದರೆ 'ಇಂದ್ರನೇ ಅವನಾದ' ಎಂಬ ಅರ್ಥದಲ್ಲೇ 'ಪದ' ವೆಂಬ ಶಬ್ದ ಪ್ರಯೋಗವಾಗಿದೆಯೇ ಹೊರತು ಅದರ ಬದಲು 'ಇಂದ್ರನ

ಚರಣಗಳಲ್ಲಿ ಅವನಿಗೆ ಸ್ಥಾನ ಸಿಕ್ಕಿತು' ಎಂಬ ಅರ್ಥದಲ್ಲಿ 'ಅಲ್ಲ. ಹೀಗೆ 'ಪದ' ವೆಂಬ ಶಬ್ದಕ್ಕೆ 'ಚರಣಗಳು' ಎಂಬ ಒಂದೇ ಅರ್ಥವಿರದೇ 'ಒಂದಾಗುವುದು' ಎಂಬ ಇನ್ನೊಂದು ಅರ್ಥವಿರುವ ಬಗ್ಗೆ ಈ ಓವೀಯಲ್ಲಿ ತಿಳಿಸಲಾಗಿದೆ. ಮುಂದಿನ ಓವೀಯಲ್ಲಿ 'ಪದ' ವೆಂದರೆ 'ಒಂದಾಗು' ಎಂಬ ಅರ್ಥದಲ್ಲಿ 'ಗುರುಪಾದ'ವನ್ನು ಉಪಯೋಗಿಸಲಾಗಿದೆ ಎಂದು ವಿವರಿಸಲಾಗಿದೆ.

ಓವೀ.43 : ಅದೇ ರೀತಿಯಾಗಿ 'ಸದ್ಗುರುಪದ' ಎಂಬ ಪ್ರಯೋಗದಿಂದ ಸದ್ಗುರುವಿನಲ್ಲಿ ಒಂದಾಗುವುದನ್ನೇ ತಿಳಿಸಲಾಗಿದೆ ಎಂದು ಬುದ್ಧಿವಂತರು ತಿಳಿದುಕೊಳ್ಳಬೇಕು. ಇದೇ ಪ್ರಕಾರ 'ನಮನ' ವೆಂದರೆ 'ನಮ್ರತೆ', ಅಥವಾ 'ಲೀನವಾಗುವುದು' ಎಂದರ್ಥವಾಗುತ್ತದೆ.

ವಿವರಣೆ : 'ಇಂದ್ರಪದಾರೂಢ' ಅಥವಾ 'ಇಂದ್ರಪದಗ್ರಹಣ' ಇವುಗಳಲ್ಲಿ 'ಪದ' ಶಬ್ದವು 'ಒಂದಾಗುವುದು' ಎಂಬ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ ಎಂದು ಹಿಂದಿನ ಓವೀಯಲ್ಲಿ ತಿಳಿಸಲಾಗಿದೆ. ಹಾಗೆಯೇ ಈ ಓವೀಯಲ್ಲಿ 'ಸದ್ಗುರುಪದ' ಎಂಬಲ್ಲಿ 'ಪದ' ಶಬ್ದವನ್ನು 'ಒಂದಾಗುವುದು' ಎಂಬ ಅರ್ಥದಲ್ಲೇ ಪ್ರಯೋಗಿಸಲ್ಪಟ್ಟಿದೆ ಎಂದು ತಿಳಿಸಲಾಗಿದೆ. ಮೊದಲು ಇದೇ 'ಪದ' ವೆಂಬ ಶಬ್ದಕ್ಕೆ ಅಲಂಕಾರಿಕವೆಂದೂ ಹಾಗೂ ವಿನಯಾರ್ಥಸೂಚಕವೆಂದೂ ತಿಳಿಸಲಾಗಿತ್ತು. ಆದರೆ ಈಗ 'ಪದ'ವೆಂಬ ಶಬ್ದವು ಒಂದಾಗುವುದನ್ನು ಸೂಚಿಸುತ್ತದೆ ಎಂದು ಇಲ್ಲಿ ತಿಳಿಸಲಾಗಿದೆ. ಅಂದರೆ 'ಸದ್ಗುರು ಪದ' ಎಂಬಲ್ಲಿ ಶಿಷ್ಯನು ತನ್ನ ಸದ್ಗುರುವಿನಲ್ಲಿ ತಾದಾತ್ಮ್ಯ ಭಾವವನ್ನು ( ಒಂದಾಗುವುದನ್ನು ) ಸೂಚಿಸುತ್ತದೆ ಎಂದು ಬುದ್ಧಿವಂತರು ತಿಳಿದುಕೊಳ್ಳಬೇಕು.

ಹಿಂದಿನ ಓವೀಗಳಲ್ಲಿ ಹೇಳಿದ 'ಸದ್ಗುರು' ಮತ್ತು 'ಪಾದಗಳು' ಎಂಬ ಪದಗಳ ಲಕ್ಷ್ಯಾರ್ಥವನ್ನು ಈವರೆಗೆ ತಿಳಿಸಿ ಹೇಳಿದ ನಂತರ ಈ 'ನಮನ' ಎಂಬ ಪದದ ಲಕ್ಷ್ಯಾರ್ಥವನ್ನು ಶ್ರೀಗಳು ತಿಳಿಸುತ್ತಿದ್ದಾರೆ. 'ಸದ್ಗುರು' ಹಾಗು "ಅವನ ಪಾದಗಳು" ಇವುಗಳ ಬಗ್ಗೆ ಭೌತಿಕವಾಗಿ ಇಲ್ಲಿ ಹೇಳಿಲ್ಲದಿರುವುದರಿಂದ 'ನಮನ' ಪದಕ್ಕೆ ಭೌತಿಕವಾದ ವಾಚ್ಯಾರ್ಥವನ್ನು ಅಂದರೆ ದೈಹಿಕವಾಗಿ ಸಾಷ್ಟಾಂಗ ನಮಸ್ಕಾರವನ್ನು ಇಲ್ಲಿ ಹೇಳಿಲ್ಲ. 'ನಮನ' ಪದದಿಂದ 'ನಮ್ರತೆ', ಅಥವಾ 'ನ - ಮನ' ಅಂದರೆ 'ಮನಸ್ಸನ್ನು ಇಲ್ಲದಂತೆ' ( ಮಾಡುವುದು ) ಎಂದು ಅರ್ಥವಾಗುತ್ತದೆ. ಹೀಗೆ ಮನೋವೃತ್ತಿ ಇಲ್ಲದಾಗ ಅಹಂಕಾರವು ಇರುವುದಿಲ್ಲ ಮತ್ತು ಅಹಂಕಾರವು ಇಲ್ಲದಾಗ ಸದ್ಗುರುವಿಗೂ ಮತ್ತು ತನಗೂ ವ್ಯತ್ಯಾಸವಿರದೇ ಸದ್ಗುರುವಿನಲ್ಲಿ ಒಂದಾಗುವುದು ಸಾಧ್ಯವಾಗುತ್ತದೆ. ಮುಂದಿನ ಓವೀಯಲ್ಲಿ 'ನಮನ' ಪದದ ಲಕ್ಷ್ಯಾರ್ಥವಾದ 'ಒಂದಾಗುವಿಕೆ' ಯನ್ನು ವಿಶದವಾಗಿ ಹೇಳುತ್ತಾರೆ. 'ಸದ್ಗುರು' ಹಾಗು 'ಪಾದಗಳು' ಈ ಪದಗಳ ಲಕ್ಷ್ಯಾರ್ಥಕ್ಕೆ ಅನುಗುಣವಾಗಿಯೇ 'ನಮನ' ಪದವನ್ನೂ ಅರ್ಥೈಸಿದ್ದಾರೆ ಎಂಬುದನ್ನು ಗಮನಿಸಬೇಕು.

ಓವೀ.44 : 'ನಮನ' ವೆಂದರೆ ನಮಸ್ಕರಿಸುವುದು ಅಥವಾ ವಂದ್ಯದಲ್ಲಿ ಲೀನವಾಗುವುದು ಎಂದರ್ಥ. ಅಹಂಕಾರವು ಇಲ್ಲದಾಗ ಗುರು-ಶಿಷ್ಯರಲ್ಲಿ ಭೇದವಿರುವುದಿಲ್ಲ.

ವಿವರಣೆ : 'ನಮನ'ದಲ್ಲಿ, ನಮಸ್ಕರಿಸುವವನು ತನ್ನ ನಮಸ್ಕಾರವನ್ನು ನಮಸ್ಕರಿಸಲ್ಪಡುವುದಕ್ಕೆ ( ವಂದ್ಯಕ್ಕೆ ) ಸಲ್ಲಿಸುತ್ತಾನೆ. ಹಿಂದಿನ ಓವೀಯಲ್ಲಿ ಹೇಳಿದಂತೆ 'ನ-ಮನ' ವೆಂದರೆ ಮನವನ್ನು ಇಲ್ಲದಂತೆ ಮಾಡುವುದು. ಅಂದರೆ ಮನೋವೃತ್ತಿಯನ್ನು ನಿಲ್ಲಿಸುವುದು. ಮನಸ್ಸಿನ ಏಕಾಗ್ರತೆಯನ್ನು ಒಂದು ವಿಷಯದ ಮೇಲೆ ಸಾಧಿಸಿದಾಗಲೂ ಈ ರೀತಿ ಮನೋವೃತ್ತಿಯು ನಿಲ್ಲುತ್ತದೆ. ಏಕಾಗ್ರತೆಯಿಂದ ನಮನ ಮಾಡುವಾಗ ನಮಸ್ಕರಿಸುವವನು ವಂದ್ಯದಲ್ಲಿ ಒಂದಾಗುತ್ತಾನೆ. ಏಕೆಂದರೆ ಶಿಷ್ಯನು ಏಕಾಗ್ರತೆಯಿಂದ ಗುರುವಿಗೆ ನಮನ ಮಾಡುವಾಗ ತನ್ನ ಮನೋವೃತ್ತಿಯು ನಿಂತುಹೋಗಿ ತಾನು ಗುರುವಿನಲ್ಲಿ ಒಂದಾಗುತ್ತಾನೆ. ಮನೋವೃತ್ತಿಯು ನಿಂತಾಗ ಅಹಂಕಾರವು ಇರುವುದಿಲ್ಲ. ಆಗ ಶಿಷ್ಯನು ಗುರುವಿನಲ್ಲಿ ಒಂದಾಗಲು ಯಾವ ಅಡ್ಡಿಯೂ ಇರುವುದಿಲ್ಲ. ಅಂದರೆ ಶಿಷ್ಯನು ಗುರುವಿಗೆ ನಮನ ಮಾಡುವಾಗ ಅವರಲ್ಲಿ ಯಾವ ಭೇದವೂ ಇರದೇ ಶಿಷ್ಯನು ಗುರುವಿನಲ್ಲಿ ಒಂದಾಗುತ್ತಾನೆ.

ಓವೀ.45 : ಈ ರೀತಿಯಲ್ಲಿ ಶ್ರೀಗಳು ಗುರುವಿಗೆ ನಮನವನ್ನು ಸಲ್ಲಿಸಿ ಅಂದರೆ ಸ್ವತಃ ಗುರುವೇ ಆಗಿ ತಾವು ಸ್ವತಃ ಅನುಭವಿಸಿ ಪಡೆದ ಜ್ಞಾನಾಮೃತವನ್ನು ಅಜ್ಞಾನವೆಂಬ ರೋಗದಿಂದ ಬಳಲುತ್ತಿರುವ ಅಧಿಕಾರಿಗಳಿಗೆ ಉಪದೇಶಿಸುತ್ತಾರೆ.

ವಿವರಣೆ : ಶ್ರೀಗಳು ತಾವು ತಮ್ಮ ಗುರುಗಳ ಪಾದಗಳಿಗೆ ನಮಿಸುವುದರ ಮೂಲಕ ತಾದಾತ್ಮ್ಯ ಭಾವದಿಂದ ಸ್ವತಃ ಗುರುವೇ ಆಗಿರುವುದನ್ನು ಈ ವರೆಗೆ ತಿಳಿಸಿದ್ದಾರೆ. ಇನ್ನು ಮೇಲೆ "ಜ್ಞಾನಾಧಿಕಾರಿಗಳ ಸಲುವಾಗಿ ಆತ್ಮಾನುಭವವನ್ನು ಹೇಳುವೆನು" ಎಂಬ ಮೊದಲನೆಯ ಓವೀಯ ಉಳಿದ ಭಾಗವನ್ನು ವಿವರಿಸುವರು. ಶ್ರೀಗಳು ಮೊದಲು ತಾವು ಅಂತರಂಗ ಸಾಧನಗಳಿಂದ ಬ್ರಹ್ಮಜ್ಞಾನವನ್ನು ಪಡೆದು ನಂತರ ಅಪರೋಕ್ಷಾನುಭವವೆಂಬ ಬ್ರಹ್ಮಾನಂದವನ್ನು ಆಸ್ವಾದಿಸಿ ಸಹಜವಾಗಿಯೇ ಬ್ರಹ್ಮಸ್ವರೂಪರಾಗಿದ್ದಾರೆ. ನಮ್ಮಂತಹ, ಅಜ್ಞಾನವೆಂಬ ರೋಗದಿಂದ ಬಳಲಿ ಸಂಸಾರ ದುಃಖ ಸಾಗರದಲ್ಲಿ ಮುಳುಗುತ್ತಿರುವವರಿಗೆ ದಡ ಸೇರಿಸಲು ಬ್ರಹ್ಮಜ್ಞಾನವೆಂಬ ಔಷಧವನ್ನು ನಮಗೆ ಕೊಡುವ ಉದ್ದೇಶದಿಂದ ತಾವು ಪಡೆದ ಜ್ಞಾನಾಮೃತವನ್ನೇ ನಮಗೂ ಕೊಡಲು ಈ 'ಆತ್ಮಾನುಭವ' ವೆಂಬ ಕೃತಿಯನ್ನು ನಮಗೆ ಬೋಧಿಸಿದ್ದಾರೆ.

ಓವೀ.46 : ನನಗೆ ಈ ಗುರುತ್ವವು ಹೊಸದಾಗಿ ಬಂದಿದ್ದಲ್ಲ. ಆದರೆ ಇದು ಅವಿದ್ಯೆಯಿಂದ ಮುಚ್ಚಲ್ಪಟ್ಟಿತ್ತು. ಗುರುಪ್ರಸಾದದಿಂದ ನಾನು ಈ ಆವರಣವನ್ನು ತೆಗೆದುಹಾಕಿದ್ದೇನೆ.

ವಿವರಣೆ : ಶ್ರೀಗಳಿಗೆ ಗುರುವೆಂದರೆ ಪರಬ್ರಹ್ಮ ತತ್ತ್ವವೇ ಆಗಿರುತ್ತದೆ. ತಾವು ಸ್ವತಃ ಗುರುವಾಗಿರುವುದನ್ನು ತಿಳಿಸಿ ಈ ಗುರುತ್ವವು ಹೊಸದಾಗಿ ಬಂದಿದ್ದಲ್ಲ; ಅದು ಮೊದಲಿನಿಂದಲೂ ತಮ್ಮ ಸ್ವರೂಪವೇ ಆಗಿತ್ತು ಎಂದಿದ್ದಾರೆ. ಇದು, ಪ್ರತಿ ಜೀವಿಯೂ ಸ್ವರೂಪತಃ ಬ್ರಹ್ಮನೇ ಆಗಿದ್ದರೂ ಅದು ಅವಿದ್ಯೆಯಿಂದ ಅವನಿಗೆ ತಿಳಿದಿರುವುದಿಲ್ಲ ಎಂಬ ಸಾಮಾನ್ಯ ವೇದಾಂತ ತತ್ತ್ವಕ್ಕೆ ಅನುಗುಣವಾಗಿಯೇ ಇರುತ್ತದೆ. ಶ್ರೀಗಳು ಇದೇ ರೀತಿ ತಾವು ಸ್ವರೂಪತಃ ಗುರುತ್ವವನ್ನು ಮೊದಲಿನಿಂದಲೂ ಪಡೆದಿದ್ದರೂ ಅದು ಅವಿದ್ಯೆಯಿಂದ ಮುಚ್ಚಲ್ಪಟ್ಟು ತಿಳಿಯದೇ ಇತ್ತು. ಆದರೆ ಕರುಣಾಳು ಆದ ತಮ್ಮ ಗುರುವಿನ ಪ್ರಸಾದದಿಂದ ತಾವು ಈ ಅವಿದ್ಯೆಯನ್ನು ಆತ್ಮವಿದ್ಯೆಯಿಂದ ನಿವಾರಿಸಿಕೊಂಡು ಬ್ರಹ್ಮಸ್ವರೂಪರಾಗಿ ಇರುವುದನ್ನು ಕಂಡುಕೊಂಡಿರುವುದಾಗಿ ಹೇಳಿದ್ದಾರೆ. ಗುರುವು ತಮ್ಮ ಆತ್ಮನೇ ಆಗಿದ್ದರೂ ಇಲ್ಲವೇ ಬ್ರಹ್ಮಜ್ಞಾನಿಯೇ ಆಗಿದ್ದರೂ, ಆ ಗುರುವಿನ ಕೃಪೆಯು ಅತ್ಯಂತ ಮಹತ್ವವೆಂಬುದು ಇದರಿಂದ ತಿಳಿಯುವುದು.

ಓವೀ.47 : ಹೀಗೆ ಶ್ರೀಗಳು ಅವಿದ್ಯೆಯನ್ನು ಕಳಚಿಕೊಂಡು ನಿತ್ಯ ಪ್ರಾಪ್ತವಾಗಿರುವ ತಮ್ಮ ಗುರುತ್ವವನ್ನು ( ಬ್ರಹ್ಮಸ್ವರೂಪವನ್ನು ) ಅನುಭವಿಸಿದರು. ಈ ಅನುಭವ-ಭೋಜನದ ಸವಿಯು ಅಖಂಡ ತೃಪ್ತಿಯನ್ನು ಅವರಿಗೆ ಕೊಟ್ಟಿರುತ್ತದೆ.

ವಿವರಣೆ : ತಮ್ಮ ಗುರುಗಳ ಪ್ರಸಾದದಿಂದ ಶ್ರೀಗಳು ತಾವು ಪಡೆದ ಆತ್ಮವಿದ್ಯೆಯಿಂದ ಅವಿದ್ಯೆಯನ್ನು ನಾಶಮಾಡಿ ಗುರುತ್ವವನ್ನು ( ಬ್ರಹ್ಮಸ್ವರೂಪವನ್ನು ) ಅನುಭವಿಸಿದ ಬಗ್ಗೆ ಹಿಂದಿನ ಓವೀಯಲ್ಲಿ ತಿಳಿಸಿದ್ದಾರೆ. ಈ ಓವೀಯಲ್ಲಿ ಈ ಬ್ರಹ್ಮಾನಂದವೆಂಬ ಅನುಭವಾಮೃತವನ್ನು, ನಾವು ಹಬ್ಬದ ಸಿಹಿ ಊಟವನ್ನು ಹೊಟ್ಟೆತುಂಬ ಮಾಡಿ ಸುಖಿಸಿದಂತೆ, ಶ್ರೀಗಳೂ ಕೂಡ ಅಖಂಡ ತೃಪ್ತಿ ಕೊಡುವವರೆಗೆ ಸೇವಿಸಿದ್ದಾರೆ. ಈ ಅದ್ವಯ ಸ್ವರೂಪದ ಬ್ರಹ್ಮಾನಂದವು ಸಾಮಾನ್ಯ ಲೌಕಿಕರ ಕಲ್ಪನೆಗೂ ಮೀರಿರುವಂತಹದ್ದು. ಸಕ್ಕರೆಯ ರುಚಿಯನ್ನು ಸೇವಿಸದೇ ಆ ರುಚಿಯನ್ನು ಕಲ್ಪನೆ ಮಾಡಲಾದೀತೇ? ಎಂದಿಗೂ ಸಾಧ್ಯವಿಲ್ಲದ ಮಾತು ಇದು. ಹಾಗೆಯೇ ಸ್ವತಃ ಬ್ರಹ್ಮನಾಗದ ಹೊರತು ಬ್ರಹ್ಮಾನಂದದ ಸಿಹಿಯು ತಿಳಿಯುವುದು ಸಾಧ್ಯವಿಲ್ಲ.

ಓವೀ.48 : ಆ ಬ್ರಹ್ಮಾನಂದಾಮೃತ ಪಾನವನ್ನು ಶ್ರೀಗಳು, ರುಚಿ ಇದೆಯೆಂದು ಕಂಠಪೂರ್ತಿ ಸವಿದರು; ಆಗ ನಿತ್ಯತೃಪ್ತರಾಗಿ ವಾಂತಿ ಮಾಡಿಕೊಂಡರು ಎಂದು ತಿಳಿಸಿದ್ದಾರೆ.

ವಿವರಣೆ : ಸಾಮಾನ್ಯವಾಗಿ ಹಬ್ಬ ಹರಿದಿನಗಳಲ್ಲಿ ಅನೇಕ ವೇಳೆ ಜನರು ಕಂಠಪೂರ್ತಿ ಸಿಹಿ ಪದಾರ್ಥಗಳನ್ನು ತಿಂದು ಅಜೀರ್ಣವಾಗಿ ವಾಂತಿಮಾಡಿಕೊಳ್ಳುವುದು ರೂಢಿಯಲ್ಲಿದೆ. ಅದೇ ರೀತಿ ಶ್ರೀಗಳು ಮೇಲಿನ ಉದಾಹರಣೆಯನ್ನು ಉಪಮಾನವಾಗಿ ಬಳಸಿಕೊಂಡು ತಮ್ಮ ಅನುಭವವನ್ನು ರಸವತ್ತಾಗಿ ವರ್ಣಿಸಿದ್ದಾರೆ. ಶ್ರೀಗಳು ತಮ್ಮ ಗುರುಗಳ ಅನುಗ್ರಹದಿಂದ ಪಡೆದ ಬ್ರಹ್ಮಜ್ಞಾನದಿಂದ ಜೀವನ್ಮುಕ್ತರಾಗಿ, ನಂತರ ಅದ್ವಯಾನುಭವಸ್ವರೂಪದ ಆನಂದಾಮೃತವನ್ನು ಅಖಂಡವಾಗಿ ಅನುಭವಿಸಿದ್ದಾರೆ. ಬಹುಷಃ ಶ್ರೀಗಳು ತಾಳೀಕೋಟೆಯಲ್ಲಿ ಅನೇಕ ದಿನಗಳ

ಪರ್ಯಂತ ಸಮಾಧಿಸ್ಥರಾದ ಅನುಭವವನ್ನು ಇಲ್ಲಿ ನೆನಪು ಮಾಡಿಕೊಂಡಿರಬಹುದು. ಹೀಗೆ ಶ್ರೀಗಳು ಅಧ್ಯಯಾನಂದಾಮೃತವನ್ನು ದೀರ್ಘಕಾಲ ಅನುಭವಿಸಿ, ಅದನ್ನು ಭೂರಿ ಭೋಜನವನ್ನು ಕಂಠಪೂರ್ತಿ ಮಾಡಿರುವುದಕ್ಕೆ ಹೋಲಿಸಿದ್ದಾರೆ. ಅಲ್ಲದೇ ಹೀಗೆ ಕಂಠಪೂರ್ತಿ ಮಾಡಿದ ಭೋಜನವು, ಭೋಜನಾನಂತರ ವಮನವಾಗುವಂತೆ, ತಾವೂ ಕೂಡ ಈ ಜ್ಞಾನಾಮೃತವನ್ನು ಸೇವಿಸಿ 'ನಿತ್ಯತೃಪ್ತನಾಗಿ ವಾಂತಿಮಾಡಿಕೊಂಡೆ' ಎಂದು ತಿಳಿಸಿದ್ದಾರೆ. ಈ ಅರ್ಥಾಲಂಕಾರವು ಅತ್ಯಂತ ಸುಂದರವಾಗಿ ವರ್ಣಿಸಲ್ಪಟ್ಟಿದೆ. ಇದು ಯಾಜ್ಞವಲ್ಕ್ಯರು ವಾಂತಿ ಮಾಡಿಕೊಂಡಿದ್ದನ್ನು ಶಿಷ್ಯರು ತಿತ್ತಿರಿ ಪಕ್ಷಿಗಳಾಗಿ ತಿಂದಂತಿದೆ. ಇಲ್ಲಿ ತಿಳಿಸಬೇಕಾಗಿರುವುದೇನೆಂದರೆ ವಮನ ಕಾರ್ಯದ ಅನಿವಾರ್ಯತೆಯು ಹೇಗೋ ಹಾಗೆ ಜ್ಞಾನ ಪ್ರಸಾರದ ಅಂತರಂಗದ ತುಡಿತವಿರುವುದರ ಜೊತೆಗೆ ಅಜ್ಞಾನೀ ಜನರ ಉದ್ಧಾರಮಾಡಬೇಕೆಂಬ ಅಪಾರ ಕರುಣೆಯೂ ಕೂಡ ಇದಕ್ಕೆ ಕಾರಣವಾಗಿರುತ್ತದೆ.

**ಓವೀ.49 :** ಶ್ರೀಗಳ 'ಆತ್ಮಾನುಭವ' ಕೃತಿಯೇ ಅವರು 'ವಾಂತಿ' ಮಾಡಿಕೊಂಡಿರುವುದೆಂದು ತಿಳಿಯಬೇಕು. ಈವರೆಗೆ ಆಗಿಹೋದ ಜ್ಞಾನಿಗಳೆಲ್ಲರೂ ಇಂತಹ 'ವಾಂತಿ' ಯನ್ನೇ ತಿಂದು ತೃಪ್ತರಾಗಿ ಅದನ್ನು 'ವಾಂತಿ' ಮಾಡುವಂತಹವರಾದರು.

**ವಿವರಣೆ :** ಶ್ರೀಗಳ 'ವಾಂತಿ' ಎಂಬ ಬ್ರಹ್ಮಜ್ಞಾನಾಮೃತವನ್ನೇ ಜ್ಞಾನಾಧಿಕಾರಿಗಳಿಗೆ ಹಂಚಲು ಅವರು ಬರೆದ ಕೃತಿಯೇ 'ಆತ್ಮಾನುಭ' ವಾಗಿದೆ. ಈವರೆಗೆ ಆಗಿಹೋದ ಬ್ರಹ್ಮಜ್ಞಾನಿಗಳೆಲ್ಲರೂ ಇದೇ ರೀತಿ ಜ್ಞಾನಿಗಳ ಜ್ಞಾನಾಮೃತವೆಂಬ ವಾಂತಿಯನ್ನೇ ತಿಂದು ಬ್ರಹ್ಮಜ್ಞಾನವನ್ನು ಪಡೆದವರಾಗಿದ್ದಾರೆ. ಹಾಗೆಯೇ ಇವರೆಲ್ಲರೂ 'ವಾಂತಿ' ಯನ್ನು ಕಂಠಪೂರ್ತಿ ಕುಡಿದು ಅಖಂಡ ತೃಪ್ತಿಯನ್ನು ಹೊಂದಿ, ನಂತರ ತಮ್ಮ ಶಿಷ್ಯರು ಕುಡಿಯಲು 'ವಾಂತಿ' ಮಾಡಿಕೊಂಡವರೇ ಆಗಿರುತ್ತಾರೆ. ಇಲ್ಲಿ ಶ್ರೀಗಳು, ಇರುವ ಗುರುಪರಂಪರೆಯನ್ನು ಈ ರೀತಿ ಹೇಳುತ್ತಿದ್ದಾರೆ. ಪ್ರತಿಯೊಬ್ಬ ಶಿಷ್ಯನೂ ತನ್ನ ಗುರುಪ್ರಸಾದದಿಂದ ಪಡೆದ ಜ್ಞಾನವನ್ನು ತನ್ನ ಶಿಷ್ಯನಿಗೂ ಬೋಧಿಸಲೇಬೇಕೆಂಬ ಶಾಸ್ತ್ರದ ವಿಧಿಯೂ ಕೂಡ ಇರುತ್ತದೆ.

**ಓವೀ.50 :** ಬಹಳ ಜನರು ಈ 'ವಾಂತಿ' ಯಿಂದ ಸಂಪೂರ್ಣ ತೃಪ್ತಿಯನ್ನು ಹೊಂದಿದ್ದಾರೆಂಬ ಕಾರಣಕ್ಕೆ ಇದು ಕಡಿಮೆಯಾಗಲೂ ಇಲ್ಲ; ಹಾಗೆಯೇ ಇದು 'ವಾಂತಿ' ಎಂಬ ಕಾರಣಕ್ಕೆ ಅಶುದ್ಧವೂ ಆಗಲಿಲ್ಲ.

**ವಿವರಣೆ :** ಬ್ರಹ್ಮಜ್ಞಾನವೆಂಬ 'ವಾಂತಿ' ಯನ್ನು ಅನೇಕ ಅಧಿಕಾರಿ ಸಾಧಕರು ಹಂಚಿಕೊಂಡಾಗ ಅದು ಕಡಿಮೆಯಾಗುತ್ತಾ ಬಂದು ಮುಗಿದು ಹೋಗಬಹುದು ಎಂಬ ಸಂಶಯಕ್ಕೆ ಈ 'ವಾಂತಿ' ಯು ವಿಶೇಷವಾಗಿದ್ದು ಇದು ಬಳಸಿದಂತೆಲ್ಲ ಕಡಿಮೆಯಾಗುವ ಪ್ರಶ್ನೆಯೇ ಇಲ್ಲ ಎಂದು ಇಲ್ಲಿ ತಿಳಿಸಿದ್ದಾರೆ. ಒಂದು ದೀಪದಿಂದ ಸಾವಿರಾರು ದೀಪಗಳನ್ನು ಹಚ್ಚಿಕೊಂಡರೂ ಮೊದಲಿನ ದೀಪಕ್ಕೆ ಹೇಗೆ ಯಾವ ಹಾನಿಯೂ ಆಗುವುದಿಲ್ಲವೋ ಹಾಗೆಯೇ ಇದು ಆಗಿರುತ್ತದೆ. ಅದೇ ರೀತಿ ಈ 'ವಾಂತಿ' ಯ ಇನ್ನೊಂದು ವೈಶಿಷ್ಟ್ಯವೆಂದರೆ ಇದು 'ವಾಂತಿ' ಎಂಬ ಕಾರಣಕ್ಕೆ ಎಂದೂ ಅಶುದ್ಧವೂ ಆಗಲಿಲ್ಲ. ಏಕೆಂದರೆ ಇದರ ಸೇವನೆಯಿಂದ ಸಾಧಕನು ಪರಿಪೂರ್ಣ ಚಿತ್ತ-ಶುದ್ಧನಾಗಿ

ಬ್ರಹ್ಮಜ್ಞಾನಿಯಾಗುತ್ತಾನೆ. ಇದರ ಸೇವನೆಯಿಂದ ಅನೇಕ ಜನ್ಮಗಳ ವಾಸನೆಗಳು ಕ್ಷಯವಾಗಿ ಮನಸ್ಸು ಶುದ್ಧವಾಗಿ (ಚಿತ್ತಶುದ್ಧಿಯಾಗಿ) 'ದೇಹೋऽಹಂ' ಎಂಬ ಅಜ್ಞಾನವು ನಾಶವಾಗುತ್ತದೆ.

**ಓವೀ.51 :** ಇಂತಹ ಪವಿತ್ರವಾದ 'ವಾಂತಿ' ಯನ್ನು ಬ್ರಹ್ಮಾದಿ ದೇವತೆಗಳೂ ಕೂಡ ಇಚ್ಛಿಸುತ್ತಾರೆ. ಯಾರಿಗೇ ಆಗಲಿ ಗುರುಪ್ರಸಾದವಿಲ್ಲದೇ ಇದು ಸಿಗುವುದಿಲ್ಲ. ಇದು ಶ್ರೀಗಳ ಸ್ವತಃ ಆತ್ಮಾನುಭವವಾದ್ದರಿಂದ ಅದೇ ಹೆಸರೇ ಕೃತಿಗೆ ಅನ್ವರ್ಥಕವಾಗಿದೆ.

**ವಿವರಣೆ :** ಬ್ರಹ್ಮಾತ್ಮೈಕ್ಯ ಜ್ಞಾನಾಮೃತವಾದ ಈ 'ವಾಂತಿ'ಗೆ ಬಹಳ ಬೇಡಿಕೆ ಇರುತ್ತದೆ. ಆದರೆ ಇದು ಬ್ರಹ್ಮಾದಿ ದೇವತೆಗಳಿಗೆ ಪುಣ್ಯದ ಹೆಚ್ಚಳದಿಂದ ಪ್ರಾಪ್ತಿಯಾದ ಸ್ವರ್ಗಾದಿಗಳಲ್ಲಿ ಉಂಟಾಗಿರುವ ಸುಖ-ಜೀವನದಿಂದ ಚಿತ್ತ ಶುದ್ಧಿಗೆ ಆವಶ್ಯಕವಾದ ವೈರಾಗ್ಯದ ಪಾಲನೆಯು ಕಠಿಣವಿರುತ್ತದೆ. ಆದುದರಿಂದ ಬಹಳಷ್ಟು ದೇವಗಣವು ಈ ಚಿತ್ತಶುದ್ಧಿಯಿಲ್ಲದೇ ಜ್ಞಾನದಿಂದ ವಂಚಿತವಾಗಿರುತ್ತದೆ. ಹಾಗಾಗಿ ದೇವತೆಗಳೆಲ್ಲರೂ ಈ ಅದ್ವೈತ ಜ್ಞಾನಕ್ಕಾಗಿ ಹಾತೊರೆಯುತ್ತಿರುತ್ತಾರೆ. ಆದರೆ ಈ ಜ್ಞಾನವನ್ನು ಯೋಗ್ಯ ಗುರುವಿನಿಂದಲೇ ( ಬ್ರಹ್ಮಜ್ಞಾನಿಯಾದ ಶ್ರೋತ್ರೀಯನೂ ಹಾಗೂ ಬ್ರಹ್ಮನಿಷ್ಠನೂ ಆದವನಿಂದಲೇ ) ಪಡೆಯಬೇಕಾಗುತ್ತದೆ. ಏಕೆಂದರೆ, ಸ್ವಾಭಾವಿಕವಾಗಿ ಶಿಷ್ಯನ ಮನಸ್ಸು ಬಹಿರ್ಮುಖವಾಗಿರುವುದರಿಂದ ಅವನ ಮನಸ್ಸನ್ನು ಅಂತರ್ಮುಖಮಾಡುವ ಮೂಲಕ ಅಂತರಾತ್ಮನನ್ನು ಅರಿಯಬೇಕಾಗಿರುತ್ತದೆ. ಅಲ್ಲದೇ ಇದನ್ನು ಸಾಧಿಸಲು ಅವನ ಗುರುವು ಆತ್ಮಜ್ಞಾನಿಯೇ ಆಗಿರಬೇಕಾಗಿರುತ್ತದೆ. ಸಾಮಾನ್ಯವಾಗಿ ಈ ರಹಸ್ಯ ಜ್ಞಾನವು ಸಮರ್ಥರಾದ ಗುರು-ಶಿಷ್ಯರ ಸಂವಾದದ ಮೂಲಕವೇ ಶಿಷ್ಯನಿಗೆ ಉಪದೇಶಿಸಲ್ಪಡುತ್ತದೆ. ರಾಮಾಯಣದಲ್ಲಿ ಗುರು ವಶಿಷ್ಠರು ಶ್ರೀ ರಾಮಚಂದ್ರನಿಗೆ ಈ ಆತ್ಮಜ್ಞಾನವನ್ನು ಉಪದೇಶಿಸುವ ನಿಮಿತ್ತ ಉಂಟಾದ ಅವರಿಬ್ಬರ ಸಂವಾದವನ್ನು ಕೇಳಲು ಋಷಿಮುನಿಗಳು ಹಾಗು ದೇವಾನ್-ದೇವತೆಗಳು ಹಾಜರಿದ್ದ ಬಗ್ಗೆ ಉಲ್ಲೇಖವು ಬರುತ್ತದೆ. ಪರಮಹಂಸರಾದ ಶ್ರೀಗಳು ಸ್ವತಃ ತಮ್ಮ ಆತ್ಮಾನುಭವದಿಂದ ಆತ್ಮನ ಅಪರೋಕ್ಷಜ್ಞಾನವನ್ನು ಪಡೆದವರು ಆಗಿದ್ದಾರೆ. ಅವರು ಕಾಲ್ಪನಿಕ ಶಿಷ್ಯನನ್ನು ಪೂರ್ವ-ಪಕ್ಷಿಯನ್ನಾಗಿ ಮಾಡಿಕೊಂಡು ತಾವೇ ಸಾಧ್ಯವಾದ ಎಲ್ಲ ಸಂಶಯಗಳನ್ನೂ ಕೇಳುವುದರಿಂದಲೂ ಮತ್ತು ಅವುಗಳನ್ನು ಪರಿಹರಿಸುವುದರಿಂದಲೂ ವೇದಾಂತದ ಸಕಲ ಕ್ಲಿಷ್ಟ ಸಮಸ್ಯೆಗಳಿಗೂ ಉತ್ತರಿಸುವ 'ಆತ್ಮಾನುಭವ' ಎಂಬ ವೇದಾಂತ ಕೃತಿಯನ್ನು ರಚಿಸಿದ್ದಾರೆ. ಅವರು ಪಡೆದ ಆತ್ಮಾನುಭವಕ್ಕೆ ಅನುಗುಣವಾಗಿಯೇ ಈ ಕೃತಿಯು ಇರುವುದರಿಂದ 'ಆತ್ಮಾನುಭವ' ವೆಂಬ ಹೆಸರು ಇದಕ್ಕೆ ಅನ್ವರ್ಥಕವಾಗಿದೆ ಎಂದು ಹೇಳಬಹುದು.

**ಓವೀ.52 :** ಆತ್ಮನ ಅನುಭವದಲ್ಲಿ ಅನುಭವಿತೃ, ಅನುಭವ ಹಾಗೂ ಅನುಭಾವ್ಯವೆಂಬ ತ್ರಿಪುಟಿಯು ಸಾಧ್ಯವಿಲ್ಲ. ಸ್ವಯಂಪ್ರಕಾಶವಾದ ಈ ಅದ್ವಯ ಆತ್ಮಾನುಭವವನ್ನು ಪ್ರತಿಯೊಬ್ಬನೂ ಪಡೆಯಬಹುದು.

ವಿವರಣೆ : ಯಾವುದೇ ಲೌಕಿಕ ಅನುಭವದಲ್ಲಿ *ಅನುಭವಿಸುವವನು* ( ಅನುಭವಿತೃ ), *ಅನುಭವ* ಮತ್ತು ಅನುಭವಿಸಲ್ಪಡುವ ವಿಷಯ ( *ಅನುಭಾವ್ಯ* ) ವೆಂಬ ತ್ರಿಪುಟಿಯು ಇದ್ದೇ ಇರುತ್ತದೆ. ಇದು ಅಜ್ಞಾನಾವಸ್ಥೆಯಲ್ಲಿ ನಮಗೆ ಕಂಡು ಬರುವ ತ್ರಿಪುಟಿಯಾಗಿರುತ್ತದೆ. ನಾವು ಆತ್ಮಜ್ಞಾನವಿಲ್ಲದೇ ಆತ್ಮಾನುಭವವನ್ನು ( ಸಮಾಧಿಯಲ್ಲಿ ) ಪಡೆದಾಗ ಈ ಆತ್ಮಾನುಭವವೇ ಅಜ್ಞಾನದಿಂದ ಮೂರಾಗಿ ಒಡೆದು ಜೀವ-ಇಂದ್ರಿಯಾನುಭವ-ಜಗತ್ತು ಎಂಬ ತ್ರಿಪುಟಿಯಾಗುತ್ತದೆ. ಆತ್ಮಜ್ಞಾನದಿಂದ ಉಂಟಾಗುವ ಆತ್ಮಾನುಭವ ( ಅದ್ವಯಾನುಭವ ) ದಲ್ಲಿ ಈ ರೀತಿಯ ತ್ರಿಪುಟಿಯು ಇರುವುದಿಲ್ಲ. ಆತ್ಮನು ಒಬ್ಬನೇ ಇದ್ದರೂ ಅಜ್ಞಾನದಿಂದ ಅನೇಕ 'ಜೀವ' ರಾಗಿ ಹಾಗೂ ವೈವಿಧ್ಯಮಯವಾದ ಜಗತ್ತಾಗಿ ತೋರುತ್ತಾನೆ. ಪ್ರತಿಯೊಬ್ಬನೂ ಆತ್ಮಜ್ಞಾನವನ್ನು ಪಡೆದು ತನ್ನ ಅಂತರಾಳದಲ್ಲಿ ಈ ಸ್ವಯಂಪ್ರಕಾಶ ಅದ್ವಯ ಆತ್ಮಾನಂದವನ್ನು ಪಡೆಯಬಹುದು.

ಓವೀ.53 : ಯಾವಾಗ ಬುದ್ಧಿವೃತ್ತಿಯು ನಿಂತುಹೋಗುತ್ತದೋ ಆಗ 'ನಾನು' ಎಂಬ ಅರಿವೂ ( ಚಿದಾಭಾಸವು ) ಕೂಡ ಇರುವುದಿಲ್ಲ. ಆತ್ಮನು ಈ ತ್ರಿಪುಟಿರಹಿತಸ್ಥಿತಿಯಲ್ಲಿ ತಿಳಿಯುವ ಭಾವವಿಲ್ಲದೇ ತಾನೇ ತಾನಾಗಿ ಬೆಳಗುತ್ತಾನೆ.

ವಿವರಣೆ : ಬುದ್ಧಿವೃತ್ತಿಯು ಉದ್ಭವಿಸಿದಾಗ ಅದು ನಿರಂತರವಿರುವ ಆತ್ಮಪ್ರಭೆಯಿಂದ ಬೆಳಗಿದಾಗ 'ನಾನು' ಎಂಬ ಅರಿವು ( ಚಿದಾಭಾಸವು ) ಪ್ರಕಟವಾಗುತ್ತದೆ. ಇದರ ಜೊತೆಗೆ ಆ ಬುದ್ಧಿವೃತ್ತಿಯ ವಿಷಯವನ್ನು 'ನಾನು ತಿಳಿದೆ' ಎಂಬ ತಿಳಿಯುವ ಭಾವವೂ ಕೂಡ ಪ್ರಕಟವಾಗುತ್ತದೆ. ಒಂದು ವೇಳೆ ಬುದ್ಧಿಯು ವೃತ್ತಿರಹಿತಾವಸ್ಥೆಯಲ್ಲಿದ್ದರೆ ಆಗ ನಿರಂತರ ಬೆಳಗುತ್ತಿರುವ ಆತ್ಮಪ್ರಭೆಯು ಈ ವೃತ್ತಿರಹಿತಾವಸ್ಥೆಯನ್ನು ಬೆಳಗುವುದರಿಂದ 'ನಾನು' ಎಂಬ ಚಿದಾಭಾಸವಾಗಲೀ ಹಾಗೂ ಇದರ ಜೊತೆಗೆ ವಿಷಯವನ್ನು ತಿಳಿಯುವ ಭಾವವಾಗಲೀ ಪ್ರಕಟವಾಗುವುದಿಲ್ಲ. ಇಲ್ಲಿ ಆತ್ಮನು ತಾನೇ ತಾನಾಗಿ ಅದ್ವಯರೂಪದಿಂದ ರಾರಾಜಿಸುತ್ತಾನೆ.

ಓವೀ.54 : ಇಂತಹ ವೃತ್ತಿರಹಿತಾವಸ್ಥೆಯಾದ ಸ್ವಾನುಭವದಲ್ಲಿ ಅರಿಯುವ ಭಾವವಾಗಲೀ ಅಥವಾ ತ್ರಿಪುಟಿಯಾಗಲೀ ಇರುವುದಿಲ್ಲ. ಮತ್ತು ಆತ್ಮನು '*ತಾನೇ ತಾನಾಗಿ ಇದ್ದೇನೆ*' ಎಂಬ ಸ್ವಾನುಭವವನ್ನು ಪಡೆಯುತ್ತಾನೆ.

ವಿವರಣೆ : ಈ ಓವೀಯು ಹಿಂದಿನ ಓವೀಯ ಮುಂದುವರಿದ ಭಾಗವಾಗಿರುತ್ತದೆ. ಯಾವಾಗ ಬಾಹ್ಯ ಕರಣಗಳು (ದಶ ಇಂದ್ರಿಯಗಳು ) ಮತ್ತು ಅಂತಃಕರಣಗಳು ( ಮನೋ, ಬುದ್ಧಿ, ಚಿತ್ತ ಮತ್ತು ಅಹಂಕಾರ ) ಕೆಲಸ ಮಾಡದಿದ್ದಾಗ ( ವೃತ್ತಿರಹಿತವಾದಾಗ ) 'ನಾನು' ಎಂಬ ಅಹಂಕಾರವಾದ ಚಿದಾಭಾಸವಾಗಲೀ ಅಥವಾ ಯಾವುದಾದರೂ ವಿಷಯವನ್ನು ತಿಳಿದ ಭಾವವಾಗಲೀ ಇರುವುದಿಲ್ಲ. ತಿಳಿಯುವ ಭಾವವು ಇಲ್ಲದಾಗ ತಿಳಿಯುವನು-ತಿಳುವಳಿಕೆ-ತಿಳಿಯಲ್ಪಟ್ಟ ವಿಷಯ ಎಂಬ ತ್ರಿಪುಟಿಯಾಗಲೀ ಇರುವುದಿಲ್ಲ. ಏನೂ ಇಲ್ಲದ ಈ ಅವಸ್ಥೆಯಲ್ಲಿ ಆತ್ಮನು ತಾನೇ ತಾನಾಗಿ ಇರುವ ಬಗ್ಗೆ ಅದ್ವಯಾನುಭವವನ್ನು ( ಸ್ವಾನುಭವವನ್ನು ) ಹೊಂದುತ್ತಾನೆ.

ಓವೀ.55 : ಈ ರೀತಿಯ ಆತ್ಮನ ತಾನೇ ತಾನಾಗಿರುವ ಸ್ವಾನುಭವವು ಆದ ಬಗ್ಗೆ ಜಾಗ್ರತಾವಸ್ಥೆಯಲ್ಲಿ ಬುದ್ಧಿಯ ಸ್ಮರಣೆಗೆ ಹೇಗೆ ತಿಳಿಯುತ್ತದೆ? ಏಕೆಂದರೆ ಸ್ವಾನುಭವವು ಇರುವ ತುರ್ಯಾವಸ್ಥೆಯಲ್ಲಿ ಬುದ್ಧಿಗೆ ಅಸ್ತಿತ್ವವಿರುವುದಿಲ್ಲ, ಅಂದರೆ ಬುದ್ಧಿಯು ನಿಶ್ಚಯವಾಗಿ ಸಜೀವವಾಗಿರುವುದಿಲ್ಲ.

ವಿವರಣೆ : ಹಿಂದಿನ ಓವೀಯಲ್ಲಿ ವಿವರಿಸಿದ ಆತ್ಮನ ಅದ್ವಯ ಸ್ವಾನುಭವವು ತುರ್ಯಾವಸ್ಥೆಯಲ್ಲಿರುತ್ತದೆ. ಈ ಅವಸ್ಥೆಯು ಮುಗಿದ ನಂತರ ಜಾಗ್ರತಾವಸ್ಥೆಯಲ್ಲಿ ಬುದ್ಧಿವೃತ್ತಿಯು ಕಾಣಿಸಿಕೊಳ್ಳುತ್ತದೆ. ಆಗ ಬುದ್ಧಿಗೆ ಹಿಂದ ಅನುಭವಿಸಿದ ಆತ್ಮನ ನಿರ್ವಿಕಲ್ಪ ಸ್ವಾನುಭವದ ಅವಸ್ಥೆಯು ಸ್ಮರಣೆಗೆ ಬರುತ್ತದೆ. ಆದರೆ ನಂತರ ಜಾಗ್ರತಾವಸ್ಥೆಯಲ್ಲಿ ಬರುವ ಬುದ್ಧಿಗೆ ಈ ಸ್ವಾನುಭವದ ಅನುಭವವು ಇರಲು ಸಾಧ್ಯವಿಲ್ಲ. ಏಕೆಂದರೆ ತುರ್ಯಾವಸ್ಥೆಯಲ್ಲಿ ಬುದ್ಧಿಗೆ ಅಸ್ತಿತ್ವವಿರುವುದಿಲ್ಲ. ಹಾಗಾದರೆ ಜಾಗ್ರತಾವಸ್ಥೆಯಲ್ಲಿ ಬುದ್ಧಿಗೆ ನಿರ್ವಿಕಲ್ಪಾನುಭವದ ಸ್ಮರಣೆಯು ಬರಲು ಹೇಗೆ ಸಾಧ್ಯವಿದೆ ಎಂಬ ಪ್ರಶ್ನೆಯನ್ನು ಈ ಓವೀಯಲ್ಲಿ ಕೇಳಲಾಗಿದೆ. ಈ ಪ್ರಶ್ನೆಗೆ ಮುಂದಿನ ಓವೀಯಲ್ಲಿ ಪರಿಹಾರವನ್ನು ತಿಳಿಸಲಾಗಿದೆ.

ಓವೀ.56 : ಆದರೆ ಈ ಸ್ವಾನುಭವವು ಬುದ್ಧಿಗೆ ನೇರವಾಗಿ ಬರಲಿಲ್ಲ . ಏಕೆಂದರೆ ಈ ಅವಸ್ಥೆಯಲ್ಲಿ ಬುದ್ಧಿಗೆ ಅಸ್ತಿತ್ವವು ಇಲ್ಲದಿರುವುದರಿಂದ ಆ ಸ್ವಾನುಭವವು ಬುದ್ಧಿಗೆ ಆಗುವಂತಿಲ್ಲ. ಆದುದರಿಂದ ಅದು ಯಾವುದರ 'ಅನುಭವ' ವೆಂದಾಗ, ಅದು ಆತ್ಮನದೇ ಆಗಿರುತ್ತದೆ.

ವಿವರಣೆ : ತುರ್ಯಾವಸ್ಥೆಯಲ್ಲಿ ಆಗುವ ಸ್ವಾನುಭವವು ಅದ್ವಯವಾಗಿರುತ್ತದೆ. ಈ ಅವಸ್ಥೆಯಲ್ಲಿ ಬುದ್ಧಿವೃತ್ತಿಯು ಅಭಾವವನ್ನು ಹೊಂದಿರುತ್ತದೆ. ಜಾಗ್ರತಾವಸ್ಥೆಯಲ್ಲಿ ಕಾಣುವ ಬುದ್ಧಿಗೆ ತುರ್ಯಾವಸ್ಥೆಯಲ್ಲಿರುವ ಸ್ವಾನುಭವವು ಉಂಟಾಗಲು ಸಾಧ್ಯವಿಲ್ಲವೆಂದು ಹಿಂದಿನ ಓವೀಯಲ್ಲಿ ತಿಳಿಸಲಾಗಿದೆ. ಆದರೆ ಬುದ್ಧಿಗೆ ಈ ಸ್ವಾನುಭವದ ಅನುಭವವು ಸ್ಮರಣೆಗೆ ಬರುವುದು ನಿಶ್ಚಿತವಾಗಿರುತ್ತದೆ. ಹೇಗೆಂದರೆ ಸುಷುಪ್ತಿಯ ಅನುಭವದಲ್ಲೂ ಬುದ್ಧಿವೃತ್ತಿಯು ಅಭಾವವನ್ನು ಹೊಂದಿದ್ದರೂ ಕೂಡ ಜಾಗ್ರತಾವಸ್ಥೆಯಲ್ಲಿ ಸುಷುಪ್ತಿಯ ಅನುಭವದ ಸ್ಮರಣೆಯು ಆಗುವುದು ನಮ್ಮೆಲ್ಲರ ಅನುಭವವಾಗಿರುತ್ತದೆ. ಅಲ್ಲದೇ ಸಮಾಧಿಸ್ಥರಾದ ಸಕಲ ಯೋಗಿಗಳೂ ತಮ್ಮ ಸ್ವಾನುಭವವನ್ನು ಸ್ಮರಣೆಗೆ ತಂದುಕೊಂಡು ತಮ್ಮ ಶಿಷ್ಯರಿಗೆ ಉಪದೇಶವನ್ನು ಮಾಡಿರುತ್ತಾರೆ. ಆದುದರಿಂದ ಬುದ್ಧಿಗೆ ತನಗೆ ನೇರವಾಗಿ ಆದ ಅನುಭವದ ಸ್ಮರಣೆ ಇದು ಆಗಿರುವುದಿಲ್ಲ. ಇದು ಆತ್ಮನ ಅನುಭವದಿಂದಲೇ ಬುದ್ಧಿಗೆ ಆದ ಸ್ಮರಣೆ ಆಗಿರಲೇಬೇಕು. ಇಲ್ಲಿ ಆತ್ಮನ ನಿರ್ವಿಕಲ್ಪಾನುಭವವು ಬುದ್ಧಿಗೆ ಅನುವಾದಗೊಳ್ಳುವುದರಿಂದ ( ಆರೋಪಗೊಳ್ಳುವುದರಿಂದ ) ಆ ಸ್ವಾನುಭವವು ಬುದ್ಧಿಯ ಸ್ಮರಣೆಗೆ ಬರಲು ಶಕ್ಯವಾಗುತ್ತದೆ. ಇದೇ ರೀತಿ ಸುಷುಪ್ತಿ ಅವಸ್ಥೆಯಲ್ಲೂ ಆತ್ಮನ ಅನುಭವವು ಬುದ್ಧಿಗೆ ಅನುವಾದಗೊಂಡು ಸುಷುಪ್ತಿಯ ಅನುಭವವು ಬುದ್ಧಿಯ ಸ್ಮರಣೆಗೆ ಬರುವ ವಿಷಯವನ್ನು ಈ ಹಿಂದೆ

ಪ್ರಸ್ತಾಪಿಸಲಾಗಿದೆ. ಆದುದರಿಂದ ತುರ್ಯಾವಸ್ಥೆಯಲ್ಲಿರುವ ನಿರ್ವಿಕಲ್ಪಾನುಭವವು ಆತ್ಮನ ಅಸ್ತಿತ್ವವೇ ಆಗಿದ್ದು ಅಲ್ಲಿ ಬುದ್ಧಿಗೆ ಅಸ್ತಿತ್ವವು ಇರುವುದಿಲ್ಲ.

**ಓವೀ.57 :** ನಿರ್ವಿಕಲ್ಪಾನುಭವವು ಸ್ವತಃ ಆತ್ಮನದೇ ಆಗಿರುವಾಗ 'ಆತ್ಮಾನುಭವವನ್ನು ಹೇಳುವೆನು' ಎನ್ನುವುದು ಎಷ್ಟು ಸರಿ ? ಏಕೆಂದರೆ ಈ ಅವಸ್ಥೆಯಲ್ಲಿ ಆತ್ಮನ ವರ್ಣನೆಗೆ ಬೇಕಾದ ವಾಣಿಯು ನಿಶ್ಚಯವಾಗಿಯೂ ಇರುವಂತಿಲ್ಲ.

ವಿವರಣೆ : ಶ್ರೀಗಳು ತಮ್ಮ ಮೊದಲನೆಯ ಓವೀಯಲ್ಲಿ ತಾವು ಪಡೆದ ಆತ್ಮಾನುಭವವನ್ನು ಜ್ಞಾನಾಧಿಕಾರಿಗಳಿಗೆ "ಹೇಳುವೆನು" ಎಂದು ತಿಳಿಸಿದ್ದಾರೆ. ಆದರೆ ಈ ವರೆಗೆ ತಮಗೆ ಆದ ಆತ್ಮನ ನಿರ್ವಿಕಲ್ಪಾನುಭವವು ಕಲ್ಪನಾರಹಿತವಾಗಿರುವುದರಿಂದ ಅದು ಅವರ್ಣನೀಯವಾಗಿರುತ್ತದೆ ಎಂದು ತಿಳಿಸಿರುತ್ತಾರೆ. ಇಂತಹ ಅನುಭವವನ್ನು ಇತರರಿಗೆ ತಿಳಿಸಿ ಹೇಳುವುದು ಎಷ್ಟು ಸರಿ ? ಏಕೆಂದರೆ, ಇಂತಹ ನಿರ್ವಿಕಲ್ಪಾನುಭವದಲ್ಲಿ ಮನಸ್ಸಿಗಾಗಲೀ ಅಥವಾ ಮಾತಿಗಾಗಲೀ ಅವಕಾಶವಿರುವುದಿಲ್ಲ. ಸ್ವಾನುಭವವು ಅವರವರ ಅಂತರಾಳದಲ್ಲಿ ಉಂಟಾಗುವ ಪ್ರಕ್ರಿಯೆಯಾಗಿದ್ದು ಇದನ್ನು ಇನ್ನೊಬ್ಬರಿಗೆ ತಿಳಿಸಿ ಹೇಳುವುದು ಸಾಧ್ಯವಿಲ್ಲವೆಂಬುದು ಓವೀಯ ತಾತ್ಪರ್ಯವಾಗಿದೆ.

**ಓವೀ.58 :** ಆದರೆ ಶಬ್ದಕ್ಕೂ ಮೊದಲು ಅದರ ಅರ್ಥವಿರುವುದರಿಂದ ಅರ್ಥವು ಶಬ್ದಾತ್ಪರವು ( ಶಬ್ದಕ್ಕೆ ಅತೀತ ) ಆಗಿರುತ್ತದೆ. ನಿರ್ವಿಕಲ್ಪವೂ ಹಾಗೂ ನಿಶ್ಶಬ್ದರೂಪವೂ ಆದ ಆತ್ಮವು ಅರ್ಥರೂಪವಾಗಿರುವುದರಿಂದ ಅದನ್ನು ಶಬ್ದದಿಂದ ತಿಳಿಯಲು ಹಾಗೂ ತಿಳಿಸಲು ಬರುತ್ತದೆ.

ವಿವರಣೆ : ಶಬ್ದಕ್ಕೂ ಹಾಗೂ ಅದರ ಅರ್ಥಕ್ಕೂ ನಿಕಟ ಸಂಬಂಧವಿರುತ್ತದೆ. ಅರ್ಥವು ಜ್ಞಾನವನ್ನು ಸೂಚಿಸುತ್ತದೆ. ಶಬ್ದವು ಈ ಅರ್ಥದ ಸಾಂಕೇತಿಕ ಅಭಿವ್ಯಕ್ತಿಯಾಗಿರುತ್ತದೆ. ಅರ್ಥವೂ ಶಬ್ದಕ್ಕಿಂತ ಮೊದಲೇ ಇದ್ದು ಅದು ಶಬ್ದಕ್ಕಿಂತ ಅತೀತವಾಗಿರುತ್ತದೆ. ಅಂದರೆ ಅರ್ಥವು 'ಶಬ್ದಾತ್ಪರ' ವಾಗಿದೆ ಎಂದರ್ಥ. ವಸ್ತುವಿನ ಅನುಭವದ ಹಿನ್ನೆಲೆಯಲ್ಲಿ ಆ ವಸ್ತುವಿನ ಜ್ಞಾನವಾಗುವುದು ( ಅರ್ಥವಾಗುವುದು ) ಶಬ್ದಗಳ ಮೂಲಕವೇ ಆಗಿರುತ್ತದೆ. ಆತ್ಮವು ನಿರ್ವಿಕಲ್ಪವೂ, ನಿಶ್ಶಬ್ದವೂ ಮತ್ತು ಅದ್ವಯವೂ ಆಗಿದ್ದು ಅನುಭವ ಸ್ವರೂಪವಾಗಿರುತ್ತದೆ. ಅದರ ಅನುಭವ ಆದವರಿಗೆ ಅದರ ಅರ್ಥವನ್ನು ಅಂದರೆ ಅದರ ಜ್ಞಾನವನ್ನು ಶಬ್ದರೂಪದಿಂದ ಹೇಳಬಹುದಾಗಿರುತ್ತದೆ. ಅಂದರೆ ಆತ್ಮಾನುಭವದಲ್ಲಿ ಮನೋವೃತ್ತಿಗಾಗಲೀ, ಮಾತಿಗಾಗಲೀ, ಅವಕಾಶವಿಲ್ಲದಿದ್ದರೂ ಅದನ್ನು ಶಬ್ದಗಳ ಮೂಲಕ ತಿಳಿಸಬಹುದು. ಹೀಗೆ ನಿಶ್ಶಬ್ದವನ್ನು ( ನಿರ್ವಿಕಲ್ಪಾನುಭವವನ್ನು ) ಶಬ್ದದಿಂದ ವ್ಯಕ್ತಮಾಡಬಹುದು.

**ಓವೀ.59 :** 'ಪರಾ', 'ಪಶ್ಯಂತೀ', 'ಮಧ್ಯಮಾ' ಮತ್ತು 'ವೈಖರೀ ಎಂಬ ಚತುರ್ವಿಧ ವಾಣಿಗಳಿವೆ. ಅವುಗಳಲ್ಲಿ ಕೊನೆಯ ಮೂರು ವಾಣಿಗಳಿಂದ ಪ್ರಪಂಚವೆಲ್ಲವೂ ಆತ್ಮನ ಮೇಲೆ ಕಲ್ಪಿತವಾಗಿದೆ.

ವಿವರಣೆ : 'ಪರಾ', 'ಪಶ್ಯಂತೀ', 'ಮಧ್ಯಮಾ' ಮತ್ತು 'ವೈಖರೀ' ಇವುಗಳು ಚತುರ್ವಿಧ ವಾಣಿಗಳಾಗಿದ್ದಾವೆ. ಈ ನಾಲ್ಕರಲ್ಲಿ ಕೊನೆಯ ಮೂರು ವಾಣಿಗಳಿಂದ ಇಡೀ ಈ ಪ್ರಪಂಚವೆಲ್ಲವೂ ವ್ಯಕ್ತವಾಗಿದ್ದು, ಅದು ಪರಮ ಸತ್ಯವಾದ ಅದ್ವಯ ಆತ್ಮನ ಮೇಲೆ ಕಲ್ಪಿತವಾಗಿರುತ್ತದೆ. ಈ ಪ್ರಪಂಚವನ್ನು ಅವ್ಯಾಕೃತವೆಂಬ ಕಾರಣರೂಪ, ಹಿರಣ್ಯಗರ್ಭವೆಂಬ ಮಾನಸಿಕ ಸೂಕ್ಷ್ಮರೂಪ ಮತ್ತು ವಿರಾಟ್ ಎಂಬ ಸ್ಥೂಲರೂಪಗಳೆಂದು ಮೂರು ಭಾಗಗಳನ್ನಾಗಿ ಮಾಡಬಹುದು. ಇದೇ ಈ ಮೂರು ಭಾಗಗಳು ಕ್ರಮವಾಗಿ 'ಪಶ್ಯಂತೀ', 'ಮಧ್ಯಮಾ' ಮತ್ತು 'ವೈಖರೀ' ಗಳೆಂಬ ವಾಣಿಗಳಿಂದ ಅಭಿವ್ಯಕ್ತಗೊಂಡಿವೆ.

ಓವೀ.60 : 'ಪರಾ' ವಾಣಿಯೆಂಬ ನಾಲ್ಕನೆಯದು ವಾಕ್ ಗೆ ಅತೀತವಾದ ( ವಾಕ್ಪರ ) ಆತ್ಮನನ್ನು ವಿಷಯ ಮಾಡಬಲ್ಲದು ( ತಿಳಿಯಬಲ್ಲದು ). ಇದರಲ್ಲಿ ಸಂಶಯಕ್ಕೆ ( ವಿಕಲ್ಪಕ್ಕೆ ) ಸ್ವಲ್ಪವೂ ಅವಕಾಶವಿಲ್ಲ.

ವಿವರಣೆ : ಆತ್ಮನು ಮಾತಿಗೂ ಮತ್ತು ಮನಸ್ಸಿಗೂ ನಿಲುಕದೇ ಇರುವ ತತ್ತ್ವವಾಗಿರುತ್ತದೆ ( "ಯಥೋ ವಾಚೋ ನಿವರ್ತಂತೇ ತತ್ ಪ್ರಾಪ್ಯ ಮನಸಾ ಸಹ" - ತೈತ್ತರಿಯೋಪನಿಷತ್, ಬ್ರಹ್ಮಾನಂದವಲ್ಲಿ, 4 ನೆಯ ಅನುವಾಕ ). ಅಂದರೆ ಲೌಕಿಕವಾಗಿ ಯಾವ ಭಾಷೆಯನ್ನು ನಾವು 'ಪಶ್ಯಂತೀ', 'ಮಧ್ಯಮಾ' ಮತ್ತು 'ವೈಖರೀ' ಎಂದು ಮೂರು ಭಾಗಗಳನ್ನಾಗಿ ಮಾಡುತ್ತೇವೆಯೋ ಆ ಮೂರೂ ರೂಪಗಳು ಆತ್ಮನ ನಿರ್ಗುಣ ಸ್ವರೂಪವನ್ನು ವರ್ಣಿಸಲಾರವು. ಆದರೆ ನಾಲ್ಕನೆಯದಾದ 'ಪರಾ' ವಾಣಿಯು ಮಾತ್ರ ಆತ್ಮನನ್ನು ವಿಷಯ ಮಾಡಬಲ್ಲದು ( ತಿಳಿಯಬಲ್ಲದು ). ಹೀಗೆ 'ವಾಕ್' ಗೆ ಅತೀತನಾದ ( ವಾಕ್ಪರ ) ಆತ್ಮನನ್ನು 'ಪರಾ' ವಾಣಿಯಿಂದ ತಿಳಿದಾಗ ನಿಶ್ಚಯವಾಗಿಯೂ ಸಂಶಯಕ್ಕೆ ಅವಕಾಶವಿರುವುದಿಲ್ಲ.

ಓವೀ.61 : 'ಪರಾ' ವಾಣಿಯ ಅರ್ಥವೇ ಆತ್ಮನಾಗಿದ್ದಾನೆ. ಆದುದರಿಂದ ಅವನು ಪರಮಾರ್ಥನಾಗಿದ್ದಾನೆ. ಇನ್ನು ಮೇಲೆ ಶ್ರೀಗಳು ಸೃಷ್ಟಿಗೆ ಕಾರಣವಾದ ಉಳಿದ ಮೂರು ವಾಣಿಗಳನ್ನು 'ಪರಾ'ರೂಪಗೊಳಿಸಿ ಅಂದರೆ ಶಬ್ದದಿಂದ ಶಬ್ದವನ್ನು ನಾಶಮಾಡಿ ನಿಶ್ಶಬ್ದ ( ನಿರ್ವಿಕಲ್ಪಾನುಭವ ) ವಾದ ಆತ್ಮವು ಪ್ರಕಟವಾಗುವಂತೆ ಆತ್ಮಾನುಭವವನ್ನು ಹೇಳುತ್ತಾರೆ.

ವಿವರಣೆ : ಎಲ್ಲ ವಾಣಿಗಳಂತೆ 'ಪರಾ' ವಾಣಿಯೂ ಕೂಡ ಒಂದು ಸಂಕೇತವಾಗಿರುತ್ತದೆ. ಆತ್ಮನನ್ನು ವಿಷಯೀಕರಿಸುವ ಶುದ್ಧ-ಸಾತ್ವಿಕ ವೃತ್ತಿಯ ವ್ಯಕ್ತರೂಪವೇ ಈ 'ಪರಾ' ವಾಣಿಯಾಗಿದೆ. ಆದುದರಿಂದ ಈ 'ಪರಾ'ವಾಣಿಯ ಅರ್ಥವೇ ನಿಶ್ಶಬ್ದ ಸ್ವರೂಪನಾದ ಆತ್ಮನಾಗಿದ್ದಾನೆ. ಆತ್ಮನು ಸರ್ವಕ್ಕೂ ಅಧಿಷ್ಠಾನನಾಗಿರುವುದರಿಂದ ಅವನನ್ನು ತಿಳಿಸುವ 'ಪರಾ' ವಾಣಿಯು ನಿತ್ಯ ಸತ್ಯವಾಗಿರುವುದರಿಂದ ಅದು ಪರಮಾರ್ಥವಾಗಿರುತ್ತದೆ. ಮುಂದಿನ ಓವೀಗಳಲ್ಲಿ ಸೃಷ್ಟಿಸಲ್ಪಟ್ಟ ಪ್ರಪಂಚಕ್ಕೆ ಕಾರಣವಾದ ಉಳಿದ ಮೂರು

ವಾಣಿಗಳಿಂದ 'ಪರಾ' ವಾಣಿಯನ್ನು ಅರಿಯಲು ( ಆ ಮೂರು ವಾಣಿಗಳನ್ನು 'ಪರಾ' ರೂಪಗೊಳಿಸಲು ) ಶಬ್ದದಿಂದ ಶಬ್ದವನ್ನೇ ನಾಶಮಾಡಿ, ಅಂದರೆ ಪ್ರಪಂಚದ ಮಿಥ್ಯತ್ವವನ್ನು ತಿಳಿಸಿ, ನಿಶ್ಶಬ್ದವಾದ ಆತ್ಮನನ್ನು ಪ್ರಕಟಪಡಿಸಲಾಗಿದೆ.

ಓವೀ.62 : ಕಣ್ಣಿಗೆ ತನ್ನನ್ನು ನೋಡಿಕೊಳ್ಳಲು ಎದುರಿಗೆ ಕನ್ನಡಿಯು ಬೇಕೇ ಬೇಕಾಗುತ್ತದೆ. ಹಾಗೆಯೇ ನಿಶ್ಶಬ್ದವನ್ನು ತಿಳಿಯಲು ಶಬ್ದವು ಬೇಕೇ ಬೇಕಾಗುತ್ತದೆ.

ವಿವರಣೆ : ಕಣ್ಣಿಗೆ ಇಡೀ ಪ್ರಪಂಚವನ್ನು ನೋಡುವ ಶಕ್ತಿ ಇರುತ್ತದೆ. ಆದರೆ ಅದಕ್ಕೆ ತನ್ನನ್ನೇ ತಾನು ನೋಡಿಕೊಳ್ಳಲು ಆಗುವುದಿಲ್ಲ. ಆದರೆ ಒಂದು ಕನ್ನಡಿಯು ಎದುರಿಗೆ ಇದ್ದಾಗ ಕಣ್ಣು, ತನ್ನನ್ನು ತಾನು ಪ್ರತಿಬಿಂಬ ರೂಪದಲ್ಲಿ ತಿಳಿಯುತ್ತದೆ. ಹಾಗೆಯೇ ನಿಶ್ಶಬ್ದ ರೂಪವಾದ ಆತ್ಮನನ್ನು ತಿಳಿಯಬೇಕಾದರೆ ಶಬ್ದವು ಇಲ್ಲದೇ ತಿಳಿಯಲಾಗುವುದಿಲ್ಲ. ಇಲ್ಲಿ ಹೇಗೆ ಕನ್ನಡಿಯಿಂದ ಪ್ರತಿಬಿಂಬ ರೂಪದಲ್ಲಿರುವ ಕಣ್ಣನ್ನು ನೋಡಲು ಸಾಧ್ಯವಾಗುತ್ತದೋ ಹಾಗೆಯೇ ಆತ್ಮಾನುಭವವನ್ನು ಅಂದರೆ ಅನುಭವವೇದ್ಯನಾದ ಆತ್ಮನನ್ನು ತಿಳಿಯಲು ಅವನ ಪ್ರತಿರೂಪವಾದ ಶಬ್ದದಿಂದ ಅಂದರೆ 'ಓಂಕಾರ' ದಿಂದ ತಿಳಿಯಬಹುದು. ಈ ಆತ್ಮನು ನಾಲ್ಕು ಪಾದಗಳುಳ್ಳವನು ("ಅಯಂ ಆತ್ಮಾ ಚತುಷ್ಪಾತ್"). ಈ ನಾಲ್ಕು ಅವಸ್ಥೆಗಳೇ 'ಅ', 'ಉ' 'ಮ' ಮತ್ತು 'ಓಂ' ಕಾರಗಳಾಗಿವೆ.

ಓವೀ.63 : ಶಬ್ದವಿಲ್ಲದೇ ಏನನ್ನೂ ತಿಳಿಸಲು ಬರುವುದಿಲ್ಲ. ಆತ್ಮವಿಲ್ಲದೇ ಶಬ್ದವು ಉತ್ಪತ್ತಿಯಾಗುವುದಿಲ್ಲ. ಅರ್ಥ (ಜ್ಞಾನ) ವಿಲ್ಲದೇ ಶಬ್ದವಿಲ್ಲ, ಅಂದರೆ ಪ್ರತಿಯೊಂದು ಶಬ್ದಕ್ಕೂ ಅದರದೇ ಆದ ಅರ್ಥವಿರುತ್ತದೆ. ಆದುದರಿಂದ ಆತ್ಮನನ್ನು ( ಶಬ್ದಾರ್ಥವನ್ನು ) ತಿಳಿಸಲು ಶಬ್ದವು ಸಮರ್ಥವಾಗಿರುತ್ತದೆ.

ವಿವರಣೆ : ಒಂದು ವಿಷಯವನ್ನು ಇನ್ನೊಬ್ಬರಿಗೆ ತಿಳಿಸುವಾಗ ಶಬ್ದದ ಉಪಯೋಗವನ್ನು ಮಾಡಲೇಬೇಕಾಗುತ್ತದೆ. ಅಂದರೆ ವ್ಯಕ್ತಿಯ ಮನಸ್ಸಿನಲ್ಲಿ 'ಅದು ಇಂತಹುದು' ಎಂಬ ವೃತ್ತಿಯು ಹುಟ್ಟಿದಾಗ ಆ ವ್ಯಕ್ತಿಯನ್ನು ಬಿಟ್ಟರೆ ಇತರರಿಗೆ ಅದು ತಿಳಿಯುವುದಿಲ್ಲ. ಅದು ಇತರರಿಗೆ ತಿಳಿಯಬೇಕಾದರೆ ಅದನ್ನು ಶಬ್ದದ ಮೂಲಕ ಪ್ರಕಟಿಸಬೇಕಾಗುತ್ತದೆ. ಅಂದರೆ ಮನೋವೃತ್ತಿ ಹಾಗೂ ಶಬ್ದ ( ಅಥವಾ ಭಾಷೆಯು ) ಒಂದಕ್ಕೊಂದು ಅವಲಂಬಿತವಾಗಿವೆ.

ಆತ್ಮನೆಂದರೆ ಜ್ಞಾನಸ್ವರೂಪನು. ಅವನು ಚೈತನ್ಯ- ರೂಪನಾಗಿರುವುದರಿಂದ ಪ್ರತಿಯೊಂದು ವಿಷಯವೂ ಅವನಿಗೇ ತಿಳಿಯುವುದು. ಹೀಗೆ ತಿಳಿದ ಜ್ಞಾನವನ್ನು ಮನೋವೃತ್ತಿಗಳ ಮೂಲಕ ಪ್ರಕಟಿಸಬಹುದು. ಇದು, 'ಕಣ್ಣು ತನ್ನನ್ನು ತಾನು ಕನ್ನಡಿಯಲ್ಲಿನ ಪ್ರತಿಬಿಂಬವನ್ನು ನೋಡಿ ಅರಿತಂತೆ' ಇರುತ್ತದೆ. ಜಗತ್ತನ್ನೇ ತಿಳಿಯುವ ಚೈತನ್ಯ ಸ್ವರೂಪದ ಕಣ್ಣು ತನ್ನನ್ನು ತಾನು ಜಡ ಸ್ವರೂಪದ ಕನ್ನಡಿಯನ್ನು ನೋಡಿ ತಿಳಿದಂತೆ ಇದು ಇರುತ್ತದೆ. ಹೇಗೆಂದರೆ,

ಚೈತನ್ಯಸ್ವರೂಪದ ಆತ್ಮಜ್ಞಾನವನ್ನು ( 'ಪರಾ' ವಾಣಿ ), ಜಡಸ್ವರೂಪದ ಮನಸ್ಸಿನ ವೃತ್ತಿಗಳ ಮೂಲಕ ( 'ಪಶ್ಯಂತಿ' ವಾಣಿ ) ಪ್ರಕಟಪಡಿಸಬಹುದು.

ಈ ಮನೋವೃತ್ತಿಯು ಎಲ್ಲರಿಗೂ ಸಾಮಾನ್ಯವಾಗಿದ್ದರೂ ಅದು ಅವರವರಿಗೆ ತಮ್ಮ ತಮ್ಮ ಭಾಷೆಯಲ್ಲಿ ( 'ಮಧ್ಯಮಾ' ವಾಣಿ ) ಅನುವಾದವಾಗಬೇಕಾಗುತ್ತದೆ. ಹೀಗೆ ಅವರವರ ಮನಸ್ಸಿನಲ್ಲಿರುವ ಭಾಷೆಯು ಎಲ್ಲರಿಗೂ ತಿಳಿಯುವಂತೆ ಉಚ್ಛರಿಸಲ್ಪಟ್ಟಾಗ ( 'ವೈಖರೀ' ವಾಣಿ ) ಆತ್ಮನಿಗೆ ತಿಳಿದ ಆ ಜ್ಞಾನವು ಆತ್ಮನನ್ನು ಅರಿಯದಿರುವ ಎಲ್ಲರಿಗೂ ಅರ್ಥವಾಗುತ್ತದೆ. ಹೀಗೆ ಆತ್ಮನಿಲ್ಲದೇ ಶಬ್ದವು ಉತ್ಪತ್ತಿಯಾಗಲಾರದು.

ಪ್ರತಿಯೊಂದು ಉಚ್ಛರಿತ ಶಬ್ದಕ್ಕೂ ಆಯಾ ಭಾಷೆಯ ಪ್ರದೇಶದಲ್ಲಿ ಎಲ್ಲರಿಗೂ ಅರ್ಥವಾಗುವಂತೆ ಅದರದೇ ಆದ ಅರ್ಥವಿರುತ್ತದೆ. ಇಲ್ಲಿ ಶಬ್ದದ ಅರ್ಥವೆಂದರೆ ಶಬ್ದದ ವಿಷಯದ ಜ್ಞಾನವಾಗುವುದು. 'ಪುಸ್ತಕ'ವೆಂದು ಕೇಳಿದರೆ ( 'ವೈಖರಿ' ) ಪುಸ್ತಕದ ಸ್ವರೂಪವು ಮನಸ್ಸಿಗೆ ಹೊಳೆಯುತ್ತದೆ. ಆದುದರಿಂದ ಶಬ್ದಾರ್ಥವೆಂದರೆ ಶಬ್ದದ ಜ್ಞಾನವಾಗಿರುತ್ತದೆ. ಹೀಗೆ ಶಬ್ದದ ಜ್ಞಾನವಾಗಲು ಮೊದಲು ಮನಸ್ಸಿನ ವೃತ್ತಿಯು ಉಂಟಾಗಬೇಕು. ಈ ವೃತ್ತಿಯು ( 'ಪಶ್ಯಂತೀ' ) ವ್ಯಕ್ತಿಯ ಭಾಷೆಯ ( 'ಮಧ್ಯಮಾ' ) ಮೂಲಕವೇ ವ್ಯಕ್ತವಾಗಬೇಕಾಗಿರುತ್ತದೆ. ಅಂದರೆ ಮಧ್ಯಮದಿಂದಲೇ 'ಪಶ್ಯಂತೀ' ವಾಣಿಯು ವ್ಯಕ್ತವಾಗುತ್ತದೆ. ಆದುದರಿಂದ 'ಪಶ್ಯಂತೀ' ವಾಣಿಯಿಂದ ಶಬ್ದಾರ್ಥವು ಅಂದರೆ ಅದರ ಜ್ಞಾನವು ( 'ಪರಾ' ವಾಣಿ ) ತಿಳಿದುಬರುತ್ತದೆ. ಹೀಗೆ ವ್ಯಕ್ತಿಯು ಒಂದು ವಸ್ತುವನ್ನು ಅರಿಯುವಾಗ ಆತ್ಮನಿಂದ ಶಬ್ದವೂ, ಹಾಗೆಯೇ ಇನ್ನೊಬ್ಬರು ಹೇಳಿದ್ದನ್ನು ಕೇಳಿದಾಗ ಶಬ್ದದಿಂದ ಆತ್ಮವೂ ಪ್ರಕಟವಾಗುತ್ತದೆ. ಆದುದರಿಂದ ಆತ್ಮನನ್ನು ತಿಳಿಸಲು ಶಬ್ದವು ಸಮರ್ಥವಾಗಿರುತ್ತದೆ.

ಓವೀ.64 : ಮಲಗಿದ ವ್ಯಕ್ತಿಯನ್ನು ಎಬ್ಬಿಸಲು ಶಬ್ದವನ್ನು ಉಪಯೋಗಿಸುತ್ತೇವೆ. ಆದುದರಿಂದ ಶಬ್ದವು ಆತ್ಮನನ್ನು ತಿಳಿಯಲು ಸಮರ್ಥವಾಗಿದೆ ಎನ್ನುವುದು ನಿಶ್ಚಯವಾಗಿದೆ.

ವಿವರಣೆ : ಆತ್ಮನು ಚೈತನ್ಯ ಸ್ವರೂಪನು. ಚೈತನ್ಯವೆಂದರೆ ಪ್ರಜ್ಞೆ ಅಥವಾ ಅರಿವು. ನಿದ್ರೆ ಮಾಡುವಾಗ ಮನುಷ್ಯನಿಗೆ ಪ್ರಜ್ಞೆ ಇರುವುದಿಲ್ಲ. ಅವನಿಗೆ ಎಚ್ಚರವಾದಾಗ ಪ್ರಜ್ಞೆ ಬರುತ್ತದೆ. ಹೀಗೆ ಪ್ರಜ್ಞೆ ಬರುವುದೆಂದರೆ ಆತ್ಮನು ಪ್ರಕಟವಾಗುವುದೇ ಆಗಿರುತ್ತದೆ. ಏಕೆಂದರೆ ಆತ್ಮನೇ ಪ್ರಜ್ಞಾ ಸ್ವರೂಪನಾಗಿದ್ದಾನೆ. "ಪ್ರಜ್ಞಾನಂ ಬ್ರಹ್ಮ" – ಶ್ರುತಿಯ ಈ ಮಹಾ ವಾಕ್ಯವು ಪ್ರಜ್ಞೆಯೇ ಬ್ರಹ್ಮನೆಂದು ಹೇಳುತ್ತದೆ. ಹಾಗೆಯೇ "ಅಯಂ ಆತ್ಮಾ ಬ್ರಹ್ಮ" ಅಂದರೆ "ಈ ಆತ್ಮನೇ ಬ್ರಹ್ಮನು" ಎಂದು ಶ್ರುತಿಯು ಹೇಳುತ್ತದೆ. ಆದುದರಿಂದ ಆತ್ಮನೇ ಪ್ರಜ್ಞಾವಂತ ಮನುಷ್ಯನಲ್ಲಿರುತ್ತಾನೆ. ಮಲಗಿದ ಪುರುಷನನ್ನು ಬೇರೆಯವರು 'ಏಳು' ಎಂದು ದೂರದಿಂದ ಹೇಳಿಯೇ ಎಬ್ಬಿಸಬಹುದು. ಅಂದರೆ ಶಬ್ದವು ಅವನ ಆತ್ಮನನ್ನು ಪ್ರಕಟಮಾಡಲು ಸಮರ್ಥವಾಗಿರುತ್ತದೆ. ಹಾಗೆಯೇ ಶಬ್ದದಿಂದ ಆತ್ಮನನ್ನು ತಿಳಿಯಬಹುದಾಗಿರುತ್ತದೆ.

ಶ್ರೀ.65 : ಶಬ್ದದಿಂದಲೇ ಸರ್ವಸೃಷ್ಟಿಯನ್ನು ಮಾಡಲಾಗಿದೆ. ಹಾಗೆಯೇ ನಾಲ್ಕೂ ವಾಣಿಗಳು ಅಡಗಿದಾಗ ಈ ಸೃಷ್ಟಿಯು ಕಾಣುವುದಿಲ್ಲ. ಈ ಶಬ್ದವನ್ನು ( ಸೃಷ್ಟಿಯನ್ನು ) ಶಬ್ದದಿಂದಲೇ ಮಿಥ್ಯ ಮಾಡುವುದನ್ನು ( ಇದು ಸತ್ಯವಲ್ಲ ಎಂದು ತೋರಿಸುವ ಬಗೆಯನ್ನು ) ಇನ್ನು ಮುಂದೆ ವಿವರಿಸಲಾಗಿದೆ.

ವಿವರಣೆ : ಅದ್ವಯನಾದ ನಿರ್ಗುಣ ಬ್ರಹ್ಮನು ಅಥವಾ ಆತ್ಮನು ನಿತ್ಯವಾಗಿ ಒಬ್ಬನೇ ಇರುವನು ( ಏಕಮೇವ ಅದ್ವಿತೀಯಂ ಬ್ರಹ್ಮ ). ಈ ಆತ್ಮನು, ಕಲ್ಪನಾ ರೂಪದ ಮಾಯೆಯೆಂಬ ನಿತ್ಯ ಜಡ ಉಪಾಧಿಯನ್ನು ಸೇರಿಕೊಂಡಕೂಡಲೇ ವಾಚ್ಯ-ವಾಚಕ ಸಂಬಂಧವಿರುವ ಸಗುಣರೂಪದ ಈಶ್ವರ ( ಸಗುಣಬ್ರಹ್ಮ ) ನಾದನು. ಇಲ್ಲಿ 'ವಾಚಕ' ವೆಂದರೆ ಶಬ್ದವು ಹಾಗೂ ಈ ಶಬ್ದದ ಅರ್ಥವೇ ವಾಚ್ಯವಾಗಿದೆ. ಶಬ್ದಕ್ಕೂ ಮತ್ತು ಶಬ್ದಾರ್ಥಕ್ಕೂ ಭೇದವಿಲ್ಲ. 'ಪುಸ್ತಕ' ( ವಾಚಕ ) ಕ್ಕೂ ಹಾಗು ಶಬ್ದಾರ್ಥವಾದ ಪುಸ್ತಕವೆಂಬ ವಸ್ತು ( ವಾಚ್ಯ ) ವಿಗೂ ಭೇದವಿಲ್ಲ. ಹಾಗೆಯೇ 'ಓಂ' ಎನ್ನುವ ಏಕಾಕ್ಷರ ವಾಚಕಕ್ಕೆ ಅರ್ಥವೇ ಸಗುಣಬ್ರಹ್ಮ(ಈಶ್ವರ) ವಾಗಿದೆ ( "ಓಂ ಇತಿ ಏಕಾಕ್ಷರಂ ಬ್ರಹ್ಮ" ). ಮಾಯೆಯ ಕಲ್ಪನಾರೂಪದ 'ಓಂ' ಕಾರಕ್ಕೂ ಮತ್ತು ಈಶ್ವರನಿಗೂ ಯಾವ ಭೇದವೂ ಇರುವುದಿಲ್ಲ. ಮಾಂಡೂಕ್ಯ ಉಪನಿಷತ್ತಿನಲ್ಲಿ ವಾಚ್ಯರೂಪದ ಆತ್ಮನ ( ಈಶ್ವರನ ) ನಾಲ್ಕು ಅವಸ್ಥೆಗಳಿಗೆ ಕ್ರಮವಾಗಿ ವಾಚಕರೂಪದ ಓಂಕಾರಕ್ಕಿರುವ ನಾಲ್ಕು ರೂಪಗಳಿಗೆ ತಾದಾತ್ಮ್ಯವನ್ನು ಹೇಳಿರುತ್ತದೆ. ಅಂದರೆ ಆತ್ಮನ ಜಾಗ್ರತ-ಸ್ವಪ್ನ-ಸುಷುಪ್ತಿ-ತುರೀಯ ಅವಸ್ಥೆಗಳು ಓಂಕಾರದ 'ಅ' ಕಾರ, 'ಉ' ಕಾರ, 'ಮ' ಕಾರ ಮತ್ತು 'ಓಂ' ಕಾರಗಳಿಗೂ ತಾದಾತ್ಮ್ಯವನ್ನು ಹೇಳಿರುತ್ತದೆ. ಇಲ್ಲಿ 'ಓಂ' ಕಾರ ಸ್ವರೂಪ ಆತ್ಮನು ತಾನೇ ಜೀವ-ಜಗತ್ತಾಗಿ ಜಾಗ್ರತ-ಸ್ವಪ್ನ-ಸುಷುಪ್ತಿಗಳಲ್ಲಿ ತೋರಿದರೂ 'ಓಂ' ಕಾರವೆಂಬ ತುರೀಯದಲ್ಲಿ ಈ ಮೂರೂ ಅವಸ್ಥೆಗಳಿಗೂ ಅತೀತನಾದ ಸಾಕ್ಷಿಯಾಗಿಯೂ, ಅವುಗಳಿಗೆ ಅಧಿಷ್ಠಾನನಾಗಿಯೂ ಇರುತ್ತಾನೆ. ಅಂದರೆ ಹೇಗೆ 'ಓಂ'ಕಾರ ದಿಂದಲೇ ಅದರ 'ಅ', 'ಉ', ಮತ್ತು 'ಮ' ಎಂಬ ಮೂರೂ ಅಕ್ಷರಗಳು ಬರುತ್ತವೆಯೋ ಹಾಗೆಯೇ ತುರೀಯನಾದ ಆತ್ಮನಿಂದ ಮೂರೂ ಅವಸ್ಥೆಗಳು ಬರುತ್ತವೆ. ಈ ಅರ್ಥದಲ್ಲಿಯೇ 'ಓಂ' ಕಾರ ಶಬ್ದದಿಂದ ಸರ್ವ ಜೀವ ಜಗತ್ತುಗಳ ಸೃಷ್ಟಿಯಾಗಿರುತ್ತದೆ. ಅಂದರೆ 'ಪರಾ' ವಾಣಿಯಾದ 'ಓಂ'ಕಾರದಿಂದ ( ಈಶ್ವರನಿಂದ ), ಮೊದಲು 'ಪಶ್ಯಂತಿ' ವಾಣಿಯಾದ 'ಮ' ಕಾರವೂ ( ಸುಷುಪ್ತಿಯನ್ನು ಹೋಲುವ ಪ್ರಳಯದಲ್ಲಿರುವ ಅವ್ಯಾಕೃತವೂ), ಅದರಿಂದ 'ಮಧ್ಯಮಾ' ವಾಣಿಯಾದ 'ಉ' ಕಾರವೂ ( ಸ್ವಪ್ನದಲ್ಲಿರುವ ಹಿರಣ್ಯಗರ್ಭವೂ ), ಅದರಿಂದ ಜಾಗ್ರತಾವಸ್ಥೆಯಲ್ಲಿರುವ 'ವೈಖರೀ' ವಾಣಿಯಾದ 'ಅ' ಕಾರವೂ ( ವಿರಾಟ್ ಸ್ವರೂಪವೂ ) ಸೃಷ್ಟಿಯಾಗುತ್ತವೆ.

ಇದೇ ರೀತಿ ಪ್ರಳಯ ಪ್ರಕ್ರಿಯೆಯೂ ನಡೆಯುತ್ತದೆ. ಮೊದಲು 'ಅ' ಕಾರವು ( ವಿರಾಟ್ ಸ್ವರೂಪವು ) 'ಉ' ಕಾರದಲ್ಲೂ ( ಹಿರಣ್ಯಗರ್ಭದಲ್ಲೂ), 'ಉ'ಕಾರವು ( ಹಿರಣ್ಯಗರ್ಭವು ) 'ಮ'ಕಾರದಲ್ಲೂ ( ಅವ್ಯಾಕೃತದಲ್ಲೂ), ಕೊನೆಯದಾಗಿ 'ಮ' ಕಾರವು ( ಅವ್ಯಾಕೃತವು) 'ಓಂ'ಕಾರದಲ್ಲೂ ( ಸಾಕ್ಷಿ ಸ್ವರೂಪ ಈಶ್ವರನಲ್ಲೂ) ಲಯವಾಗುತ್ತವೆ.

ಅಂದರೆ 'ಓಂ'ಕಾರದಿಂದ ಜಗತ್ತು ಹೇಗೆ 'ಸೃಷ್ಟಿ' ಆಯಿತೋ ಹಾಗೆಯೇ ಅದರಲ್ಲಿಯೇ ಲಯವಾಗುತ್ತದೆ. ಹೀಗೆ 'ಓಂ'ಕಾರದಿಂದ ಅಂದರೆ ಸಾಕ್ಷಿಯಾದ ಆತ್ಮನಿಂದ ಸೃಷ್ಟಿ-ಸ್ಥಿತಿ-ಲಯಗಳು ನಡೆಯುತ್ತವೆ.

ಸೃಷ್ಟಿಯಲ್ಲಿ ತೋರುವ ಮತ್ತು ಲಯದಲ್ಲಿ ನಾಶವಾಗುವ ಜಗತ್ತು, ಹಗ್ಗದಲ್ಲಿ ಭ್ರಾಂತಿಯ ಹಾವು ತೋರಿ ಹಾರಿದಂತೆ, ಮಿಥ್ಯೆಯಾಗಿದೆ. ನಾಮ-ರೂಪಾತ್ಮಕವಾಗಿರುವ ಸತ್ಯವೆಂದು ತಿಳಿದಿರುವ ಈ ಜಗತ್ತನ್ನು ಮಿಥ್ಯೆಯೆಂದು ಬೇರೆಯವರು ತಿಳಿಸಬೇಕಾಗುತ್ತದೆ. ಸ್ಥಿರವಾಗಿರುವಂತೆ ಕಾಣುವ ಪೃಥ್ವಿಯನ್ನು 'ತಿರುಗುತ್ತಿದೆ' ಎಂದು ಹೇಳಿದಾಗ ಬರುವ ಜ್ಞಾನದಿಂದ ನಮ್ಮ ಅಜ್ಞಾನವು ( ಸ್ಥಿರವಾಗಿದೆ ಎಂಬ ಮಿಥ್ಯಾಜ್ಞಾನ ) ನಾಶವಾಗುತ್ತದೆ. ಹೀಗೆ 'ಓಂ' ಕಾರ ಶಬ್ದದಿಂದ ಸೃಷ್ಟಿಯಾದ ಈ ಜಗತ್ತನ್ನು ಅದು ಮಿಥ್ಯೆಯಾಗಿದೆ ಎಂಬ ಶಬ್ದದಿಂದ ನಿರಸನ ಮಾಡಬೇಕಾಗುತ್ತದೆ.

**ಓವೀ.66 :** ಸರ್ವಸ್ವವನ್ನೂ ಸೃಷ್ಟಿಮಾಡಿದಂತಹ 'ಓಂ'ಕಾರ ಶಬ್ದವು ಎಲ್ಲವನ್ನೂ ನಾಶಮಾಡಿ ತಾನು ನಿರ್ವಿಕಲ್ಪ ಆತ್ಮ ( ಬ್ರಹ್ಮ) ನಲ್ಲಿ ಲೀನವಾಗಿ, ಅದ್ವಯ ಆತ್ಮ ಮಾತ್ರ ವಿರಾಜಿಸುತ್ತಾನೆ.

ವಿವರಣೆ : ಸ್ಥೂಲ-ಸೂಕ್ಷ್ಮ-ಕಾರಣರೂಪದ ವಿರಾಟ್, ಹಿರಣ್ಯಗರ್ಭ ಮತ್ತು ಅವ್ಯಾಕೃತ ಸ್ವರೂಪಗಳನ್ನು ( ಅಂದರೆ ಸಕಲವನ್ನು ) ಸೃಷ್ಟಿಮಾಡುವ ಹಾಗೂ ನಾಶಮಾಡುವ ತತ್ತ್ವವು 'ಓಂ'ಕಾರವೆಂದು, ಹಿಂದಿನ ಓವೀಯಲ್ಲಿ ತಿಳಿಸಲಾಗಿದೆ. ಆದರೆ ವಿರಾಟ್, ಇತ್ಯಾದಿಗಳ ವಾಚಕಗಳಾದ 'ಅ', 'ಉ' ಮತ್ತು 'ಮ'ಕಾರಗಳಿಲ್ಲದೇ ಓಂಕಾರವು ಇರುವಂತಿಲ್ಲ. ಹಾಗೆಯೇ ಸಾಕ್ಷ್ಯಗಳಾದ ವಿರಾಟ್ ಹಾಗೂ ಮುಂತಾದವುಗಳಿಲ್ಲದೇ ಅವುಗಳ ಸಾಕ್ಷಿಯು ( ಈಶ್ವರನು ) ಇರುವಂತಿಲ್ಲ. ಹೀಗಾಗಿ, ಭ್ರಾಂತಿಯ ಹಾವು ನಾಶವಾದ ಮೇಲೆ ಹೇಗೆ ಹಗ್ಗದಲ್ಲಿಯೇ ಲೀನವಾಗುತ್ತದೋ ಹಾಗೆ ಏಕಕಾಲಕ್ಕೆ 'ಅ'ಕಾರಾದಿಗಳ ಜೊತೆಗೆ 'ಓಂ' ಕಾರವೂ ನಾಶವಾಗುತ್ತದೆ ಮತ್ತು ವಾಚಕಗಳೆಲ್ಲ ನಾಶವಾಗಿ ಎಲ್ಲ ವಾಚ್ಯಗಳೂ ಶುದ್ಧ ಆತ್ಮನಲ್ಲಿಯೇ ಲಯವಾಗುತ್ತವೆ.

**ಓವೀ.67 :** ಇರುವ ಶಬ್ದವನ್ನು ಶಬ್ದದಿಂದಲೇ ನಾಶಮಾಡದ ಹೊರತು ನಿಶ್ಶಬ್ದದ ಅನುಭವವು ಆಗುವುದಿಲ್ಲ. ಆದುದರಿಂದ 'ಆತ್ಮಾನುಭವವನ್ನು ಹೇಳುವೆನು' ಎಂಬ ಶ್ರೀಗಳ ಪ್ರತಿಜ್ಞೆಯು ಯೋಗ್ಯವಾಗಿದ್ದು ಅರ್ಥಪೂರ್ಣವಾಗಿರುತ್ತದೆ.

ವಿವರಣೆ : ಶಬ್ದರೂಪಾತ್ಮಕವಾಗಿರುವ ಇಡೀ ಜಗತ್ತನ್ನು ಸತ್ಯವೆಂದು ತಿಳಿದು ವ್ಯವಹರಿಸುತ್ತಿದ್ದೇವೆ. ಅದು ಹೇಗೆ ಸತ್ಯವಲ್ಲ, ಮಿಥ್ಯೆಯಾಗಿದೆಯೆಂದು ಬೇರೆಯವರು ತಿಳಿಸಿದಾಗ ಜ್ಞಾನೋದಯವಾಗಿ ಜಗತ್ತಿಗೆ ಅಧಿಷ್ಠಾನರೂಪವಾಗಿರುವ ನಿರ್ವಿಕಲ್ಪ ಹಾಗೂ ನಿಶ್ಶಬ್ದ ರೂಪದ ಬ್ರಹ್ಮನು ಪ್ರಕಟನಾಗುವನು. ಶಾಲೆಯಲ್ಲಿ ಮಕ್ಕಳು ಗಲಾಟೆ ಮಾಡುತ್ತಿರುವಾಗ, ಅಧ್ಯಾಪಕರು 'ಸುಮ್ಮನಿರಿ' ಎಂದು ಮಕ್ಕಳಿಗೆ ಗದರಿಸಿದಾಗ, ಶಾಲೆಯಲ್ಲಿ ನಿಶ್ಶಬ್ದವು

ಏರ್ಪಡುತ್ತದೆ. ಹೀಗೆ ಶಬ್ದದಿಂದ ಶಬ್ದವು ನಾಶವಾದಾಗ ತನಗೆ ತಾನೇ ನಿಶ್ಶಬ್ದವು ಶಾಲೆಯಲ್ಲಿ ಕಂಡುಬರುತ್ತದೆ. ಈ ಅಧ್ಯಾಯದ ಮೊದಲನೆಯ ಓವೀಯಲ್ಲಿ ಶ್ರೀಗಳು ತಮ್ಮ 'ಆತ್ಮಾನುಭವವನ್ನು ಹೇಳುತ್ತೇನೆ' ಎಂಬ ಪ್ರತಿಜ್ಞೆಯನ್ನು ಮಾಡಿ ಅವರ ಈ ಕೃತಿ ರಚನೆಯಲ್ಲಿ ಅದನ್ನು ವಿಸ್ತಾರವಾಗಿ ಹೇಳಿದ್ದಾರೆ. ತಮ್ಮ ವೈಯ್ಯಕ್ತಿಕ ಅನುಭವವನ್ನು ಹೇಗೆ ಇತರರಿಗೆ ಹೇಳಲು ಸಾಧ್ಯವಾದೀತು ಎಂಬ ಜಿಜ್ಞಾಸೆಯನ್ನು ಪ್ರಾರಂಭಿಸಿ, ಈ ಓವೀಯಲ್ಲಿ ಅದರ ಮುಕ್ತಾಯವನ್ನು ಮಾಡಿದ್ದಾರೆ. 'ಓಂ'ಕಾರ ಶಬ್ದದಿಂದ ಸರ್ವ ಸೃಷ್ಟಿ ಹಾಗೂ ಅದರ ಲಯ ಮಾಡಿರುವುದನ್ನು ಹಿಂದೆ ಪ್ರಸ್ತಾಪ ಮಾಡಲಾಗಿದೆ. ಇದರಿಂದ ಈ ಪ್ರಪಂಚವು ಮಿಥ್ಯೆಯಾಗಿದೆ ಎಂದು ಇತರರಿಗೆ ತಿಳಿಸಿ ಹೇಳಬಹುದು. ಅಂದರೆ ಶಬ್ದವನ್ನು ಶಬ್ದದಿಂದಲೇ ನಾಶಮಾಡಬಹುದಾಗಿರುತ್ತದೆ. ಆಗ ನಿಶ್ಶಬ್ದ ಸ್ವರೂಪದ ಪರಮ ಸತ್ಯವು ತಾನೇ ಪ್ರಕಟವಾಗುತ್ತದೆ. ಸತ್ಯ ಶೋಧನೆಗೆ ಇದೇ ವಿಧಾನವನ್ನು ಬೃಹದಾರಣ್ಯಕ ಶ್ರುತಿಯಲ್ಲೂ ಹೇಳಲಾಗಿದೆ. ಅಲ್ಲಿ ಭ್ರಮಾ ಹಾವಿನಂತೆ ಮಿಥ್ಯೆಯಾಗಿರುವ ಜಗತ್ತು, ತೋರಿ ನಾಶವಾಗುವುದರಿಂದ, ಜಗತ್ತನ್ನು "ನೇತಿ ನೇತಿ" ಮಾರ್ಗದಿಂದ ಅಲ್ಲಗಳೆದು ಸತ್ಯ ಸಾಕ್ಷಾತ್ಕಾರವನ್ನು ಮಾಡಬಹುದೆಂದು ತಿಳಿಸಲಾಗಿದೆ.

**ಓವೀ.68 :** "ಜ್ಞಾನಾಧಿಕಾರಿಗಳಿಗಾಗಿ ಈ 'ಆತ್ಮಾನುಭವ' ಕೃತಿಯನ್ನು ರಚಿಸಿದ್ದೇನೆ" ಎಂದು ಶ್ರೀಗಳು ಮೊದಲಿನ ಓವೀಯಲ್ಲಿ ತಿಳಿಸಿದ್ದಾರೆ. ಇಲ್ಲಿ ಜ್ಞಾನಾಧಿಕಾರಿ ಲಕ್ಷಣದ ಬಗ್ಗೆ ತಿಳಿಸುತ್ತಾರೆ.

**ವಿವರಣೆ :** ಈ ಓವೀಯಿಂದ ಸುಮಾರು 20 ಓವೀಗಳು ಅಂದರೆ ಈ ಅಧ್ಯಾಯದ ಕೊನೆಯವರೆಗೂ ಅಧಿಕಾರೀ ಲಕ್ಷಣದ ಬಗ್ಗೆಯೇ ಬರೆಯಲಾಗಿದೆ. ಮುಂದಿನ ಅಧ್ಯಾಯವು ಸಂಪೂರ್ಣವಾಗಿ ಜ್ಞಾನಾಧಿಕಾರಿಗಳ ಲಕ್ಷಣಗಳ ಬಗ್ಗೆಯೇ ಇದ್ದರೂ ಕೂಡ ಈ ಅಧ್ಯಾಯದ ಮುಂದಿನ ಭಾಗವು ಅಧಿಕಾರೀ ಲಕ್ಷಣದ ಬಗ್ಗೆ ಬರೆದ ಪೀಠಿಕೆಯಂತಿದೆ. ಮುಂದಿನ ಓವೀಗಳಲ್ಲಿ ಜ್ಞಾನಾಧಿಕಾರದ ಮಹತ್ವವನ್ನು ವಿವಿಧ ರೀತಿಯಲ್ಲಿ ವಿವರಿಸಲಾಗಿದೆ.

**ಓವೀ.69 :** 'ಅಧಿಕಾರೀ ಲಕ್ಷಣಗಳನ್ನು ತಿಳಿದುಕೊಂಡ ನಂತರವೇ ಶಿಷ್ಯನು ಸಾವಧಾನದಿಂದ ವೇದಾಂತ ಶ್ರವಣವನ್ನು ಮಾಡಬೇಕು, ಇಲ್ಲದಿದ್ದರೆ ಶ್ರವಣವು ಹಿತಕರವೆನಿಸುವುದಿಲ್ಲ' ಎಂಬುದನ್ನು ಸದ್ಗುರುವು ತನ್ನ ಶಿಷ್ಯನಿಗೆ ಅತ್ಯಂತ ಪ್ರೇಮದಿಂದ ಮಗನೇ ಎಂದು ಸಂಬೋಧಿಸಿ ಹೇಳುತ್ತಿದ್ದಾನೆ.

**ವಿವರಣೆ :** ಕೆಲವೊಂದು ಉಪನಿಷತ್ತಿನಲ್ಲಿ, ಗುರು ಶಿಷ್ಯ-ಸಂವಾದದ ಮೂಲಕ ವೇದಾಂತ ಪ್ರಮೇಯಗಳನ್ನು ತಿಳಿಸುವ ವಿಧಾನವು ಪ್ರಸಿದ್ಧವಾಗಿರುತ್ತದೆ. ಇದೇ ವಿಧಾನವನ್ನು ಈ ಗ್ರಂಥದಲ್ಲಿ ಶ್ರೀಗಳು ಅಳವಡಿಸಿದ್ದಾರೆ. ಇದರಿಂದ ಸಾಧ್ಯವಾದ ಎಲ್ಲ ಸಂಶಯಗಳನ್ನೂ ಶಿಷ್ಯನ ಪ್ರಶ್ನೆಗಳ ಮೂಲಕ ಸ್ಪಷ್ಟಪಡಿಸಿ ನಂತರ ಅವುಗಳನ್ನು ಒಂದೊಂದಾಗಿ ಉತ್ತರಿಸಬಹುದು. ಶಿಷ್ಯನು ಸರ್ವವನ್ನೂ ತ್ಯಾಗಮಾಡಿ ಸದ್ಗುರುವಿಗೆ ಸಂಪೂರ್ಣ ಶರಣಾಗತನಾಗಿ ಬಂದವನನ್ನು

ಅತ್ಯಂತ ಪ್ರೇಮದಿಂದ ಮಗನನ್ನು ನಡೆಸಿಕೊಳ್ಳುವಂತೆ 'ಮಗನೇ...' ಎಂದು ಗುರುವು ಸಂಬೋಧಿಸಿ ಹೀಗ ಹೇಳುತ್ತಾನೆ.

ವೇದಾಂತ ಪ್ರವಚನವನ್ನು ಕೇಳಲು ಬಹಳ ಜನರು ಬರಬಹುದು. ಆದರೆ ಅದನ್ನು ನಿಜವಾಗಿ ಕೇಳುವವರು ಕೆಲವೇ ಜನರಿರುತ್ತಾರೆ. ಅದರೊಳಗೂ ಬೆರಳೆಣಿಕೆಗಳಷ್ಟು ಜನ ಮಾತ್ರ ಅರ್ಥಮಾಡಿಕೊಳ್ಳಬಲ್ಲರು. ಅಂಥವವರಲ್ಲೂ ಆಸಕ್ತಿವಹಿಸಿ ಕೇಳುವವರು ಇನ್ನೂ ಅಪರೂಪವಾಗಿರುತ್ತಾರೆ. ಈ ವೈವಿಧ್ಯಕ್ಕೆ ಕಾರಣವೆಂದರೆ ಅಧಿಕಾರೀ ಭೇದವೇ ಆಗಿರುತ್ತದೆ. ವಿಜ್ಞಾನ ತರಗತಿಯಲ್ಲಿ ಕಲಾ ವಿದ್ಯಾರ್ಥಿಯು ಹೋಗಿ ಕುಳಿತರೆ ಅವನಿಗೆ ಏನೂ ಅರ್ಥವಾಗುವುದಿಲ್ಲ. ಏಕೆಂದರೆ ಆ ಜ್ಞಾನವನ್ನು ಪಡೆಯಲು ಅವನಿಗೆ ಇರಬೇಕಾದ ಅಧಿಕಾರವಿರುವುದಿಲ್ಲ. ಹಾಗೆಯೇ ಸದ್ಗುರುವಿನ ವೇದಾಂತ ಶ್ರವಣವನ್ನು ಕೇಳಲು ಶಿಷ್ಯನಿಗೆ ಕೆಲವೊಂದು ಅಧಿಕಾರೀ ಲಕ್ಷಣಗಳಿರಬೇಕಾಗುತ್ತದೆ. ಅದಿಲ್ಲದಿದ್ದಲ್ಲಿ ಅವನಿಗ ಹಿಡಿಸದ ವೇದಾಂತ ಶ್ರವಣವು ರುಚಿಸುವುದಿಲ್ಲ.

ಓವೀ.70 : ಯಾವ ರೋಗಕ್ಕೆ ಯಾವ ಔಷಧವಿದೆ ಎಂದು ತಿಳಿದುಕೊಂಡು ಆ ರೋಗ ನಿವಾರಣೆಗಾಗಿ ಆ ಔಷಧಿಯನ್ನೇ ತೆಗೆದುಕೊಳ್ಳಬೇಕು. ಅದೇ ರೀತಿ ಇರಬೇಕಾದ ಅಧಿಕಾರದ ( ಯೋಗ್ಯತೆಯ ) ಬಗ್ಗೆ ಸರಿಯಾದ ವಿಚಾರವಿಲ್ಲದೇ ಇದ್ದಾಗ ಏನನ್ನೂ ಸಾಧಿಸಲಾಗುವುದಿಲ್ಲ.

ವಿವರಣೆ : ಯಾವುದೇ ವಿದ್ಯೆಯನ್ನು ಕಲಿಯಬೇಕಾದರೂ ಅದಕ್ಕೆ ಬೇಕಾದ ಅಧಿಕಾರವನ್ನು ಸಂಪಾದಿಸಬೇಕು. ಇದನ್ನು ವಿವರಿಸಲು ಒಂದು ಉಪಮಾನವನ್ನು ಈ ಓವೀಯಲ್ಲಿ ಕೊಡಲಾಗಿದೆ. ರೋಗವು ವಾಸಿಯಾಗಲು ಔಷಧವನ್ನು ತೆಗೆದುಕೊಳ್ಳಬೇಕಾಗುತ್ತದೆ. ಆದರೆ ಪ್ರತಿಯೊಂದು ರೋಗಕ್ಕೂ ಅದರದೇ ಆದ ಔಷಧಗಳಿರುತ್ತವೆ. ಯಾವುದೇ ರೋಗವು ಬಂದಾಗ ನಾವು ಅದಕ್ಕೆ ಬೇಕಾದ ಔಷಧವನ್ನೇ ಹುಡುಕಿ ತೆಗೆದುಕೊಳ್ಳಬೇಕು. ಕಣ್ಣಿನ ರೋಗ ಬಂದರೆ ಹೊಟ್ಟೆ ನೋವಿಗೆ ಬೇಕಾದ ಔಷಧವು ಉಪಯೋಗಕ್ಕೆ ಬರುವುದಿಲ್ಲ. ಅದಕ್ಕಾಗಿ ಕಣ್ಣಿನ ಆಸ್ಪತ್ರೆಗೆ ಹೋಗಿ ಅಲ್ಲಿ ವೈದ್ಯರು ಕಣ್ಣಿನ ಆರೋಗ್ಯಕ್ಕಾಗಿ ಕೊಡುವ ಔಷಧಿಯನ್ನೇ ಕಣ್ಣಿಗೆ ಹಾಕಿಕೊಳ್ಳಬೇಕು. ಬೇರೆ ದಾರಿ ಇರುವುದಿಲ್ಲ. ಇದೇ ರೀತಿ ಏನನ್ನಾದರೂ ಸಾಧಿಸಲು ಅದಕ್ಕೆ ಬೇಕಾದ ಯೋಗ್ಯತೆಯನ್ನು ( ಅಧಿಕಾರವನ್ನು ) ಪಡೆಯದೇ ಯಾವುದೇ ಸಾಧಕನು ಯಶಸ್ವಿಯಾಗುವುದಿಲ್ಲ.

ಓವೀ.71 : ಯಾವುದೇ ಒಂದು ರೋಗಕ್ಕೆ ಇರುವ ಔಷಧಿಯನ್ನು ಬಿಟ್ಟು ಬೇರೆ ಇನ್ನೊಂದು ಔಷಧಿಯನ್ನು ತೆಗೆದುಕೊಂಡರೆ ಅದರಿಂದ ದುಷ್ಪರಿಣಾಮವು ಹೆಚ್ಚಾಗುವುದಲ್ಲದೇ ರೋಗವು ವಾಸಿಯಾಗುವುದಿಲ್ಲ. ಆದುದರಿಂದ ಅಧಿಕಾರೀ ಲಕ್ಷಣಗಳನ್ನು ಗುರುವಿನಿಂದ ಕೇಳಿ ತಿಳಿದುಕೊಳ್ಳಬೇಕು.

ವಿವರಣೆ : ರೋಗದ ಬಗ್ಗೆ ಸ್ಪಷ್ಟವಾದ ತಿಳುವಳಿಕೆಯು ಇಲ್ಲದೇ, ಇರುವ ರೋಗವು ಯಾವುದೆಂದು ವೈದ್ಯರಲ್ಲಿ ಹೋಗಿ ತಿಳಿದುಕೊಳ್ಳದೇ ನಾವೇ ಆ ರೋಗಕ್ಕೆ ಯಾವುದೋ ಔಷಧಿಯನ್ನು ತೆಗೆದುಕೊಂಡರೆ ಆಗ ರೋಗವು ವಾಸಿಯಾಗುವುದಿಲ್ಲ. ಅಲ್ಲದೇ ಅದರಿಂದ ಅನೇಕ ದುಷ್ಪರಿಣಾಮಗಳು ಉಂಟಾಗುತ್ತವೆ. ಉದಾಹರಣೆಗೆ ಯಕೃತ್ತಿನ ದೋಷದಿಂದ ಬಳಲುತ್ತಿದ್ದರೂ ಅದನ್ನು ತಿಳಿಯದೇ ತಪ್ಪಾಗಿ ಅಜೀರ್ಣವಾಗಿರಬಹುದೆಂದೂ, ಇಲ್ಲವೇ ವಾಯು ಸಂಬಂಧಿ ದೋಷದಿಂದ ರೋಗವು ಬಂದಿದೆ ಎಂದೂ ತಪ್ಪು ತಿಳಿದು ಔಷಧಾಲಯಗಳಿಂದ ಔಷಧಿಗಳನ್ನು ಸೇವಿಸುತ್ತಾ ಇದ್ದರೆ ರೋಗವು ಉಲ್ಬಣವಾಗುವುದಲ್ಲದೇ ಅನೇಕ ದುಷ್ಪರಿಣಾಮಗಳಾಗುತ್ತವೆ. ಆದುದರಿಂದ ಏನನ್ನೇ ಸಾಧಿಸಲು ಸರಿಯಾದ ಮಾರ್ಗದಲ್ಲಿ ಸಾಗಲು, ಮೊದಲು ಅದಕ್ಕೆ ಬೇಕಾದ ಅಧಿಕಾರೀ ಲಕ್ಷಣಗಳನ್ನು ಹೊಂದಬೇಕು ಹಾಗೂ ಇದಕ್ಕೆ ಬೇಕಾದ ಮಾರ್ಗದರ್ಶನವನ್ನು ಅರ್ಹತೆಯುಳ್ಳವರಲ್ಲಿ ( ಗುರುಗಳಲ್ಲಿ ) ಕೇಳಿ ತಿಳಿದುಕೊಳ್ಳಬೇಕು.

ಓವೀ.72 : ಅಧ್ಯಾತ್ಮ ವಿದ್ಯೆಗೆ ಬೇಕಾದ ಜ್ಞಾನಾಧಿಕಾರದ ಲಕ್ಷಣಗಳನ್ನು ತಿಳಿದುಕೊಳ್ಳುವ ಸಾಧಕನೇ ಧನ್ಯನಾಗಿರುತ್ತಾನೆ. ಏಕೆಂದರೆ ಅಂತಹವನಲ್ಲಿ ಮಾತ್ರ ಈ ಅಧ್ಯಾತ್ಮ ವಿದ್ಯೆಯ ಪ್ರಾಪ್ತಿಯು ಸಾಧ್ಯವಾಗುತ್ತದೆ ಎನ್ನುವುದು ನಿಶ್ಚಯವಾಗಿರುತ್ತದೆ.

ವಿವರಣೆ : ಇಲ್ಲಿಯವರೆಗೆ ಜ್ಞಾನಾಧಿಕಾರದ ಲಕ್ಷಣಗಳ ಅವಶ್ಯಕತೆಯನ್ನು ತಿಳಿಸಿದ್ದಾಯಿತು. ಇನ್ನು ಮುಂದೆ ಜ್ಞಾನಾಧಿಕಾರದ ಲಕ್ಷಣಗಳ ಮಹತ್ವವನ್ನು ತಿಳಿಸಲಾಗುತ್ತದೆ. ಈ ಓವೀಯಲ್ಲಿ ಈ ಲಕ್ಷಣಗಳನ್ನು ಸದ್ಗುರುವಿನಿಂದ ಕೇಳುವುದೇ ( ಅವುಗಳನ್ನು ಅವರಿಂದ ತಿಳಿದುಕೊಳ್ಳುವುದೇ ) ಸಾಧಕರಿಗೆ ಧನ್ಯತಾಭಾವವನ್ನು ತರುತ್ತದೆ. ಏಕೆಂದರೆ ಮೊದಲು ಕೇಳಿ ಏನೆಂದು ತಿಳಿದುಕೊಳ್ಳದೇ ಅದರ ಆಚರಣೆಯು ಸಾಧ್ಯವಿಲ್ಲ. ಅಲ್ಲದೇ ಇಂತಹ ವಿಷಯಗಳನ್ನು ಸದ್ಗುರುವಿನಿಂದ ಕೇಳಿದಾಗ ಅದರ ಆಚರಣೆಗೆ ಸ್ಫೂರ್ತಿಯು ಬರುತ್ತದೆ. ಆದುದರಿಂದ ಈ ಲಕ್ಷಣಗಳನ್ನು ತಿಳಿದಿರುವ ಸಾಧಕನೇ ಧನ್ಯನಾಗಿರುತ್ತಾನೆ. ಏಕೆಂದರೆ ಅವನಿಗೆ ಮಾತ್ರ ಗುರುವಿನ ಮುಖೇನ ಶ್ರವಣ-ಮನನಾದಿಗಳಿಂದ ಪರತತ್ತ್ವವನ್ನು ತಿಳಿಯಲು ಸಾಧ್ಯವಾಗುತ್ತದೆ.

ಓವೀ.73 : ಜ್ಞಾನಾಧಿಕಾರಿಯ ಯೋಗ್ಯತೆಯು ಬ್ರಹ್ಮಾದಿ ದೇವತೆಗಳಿಗೂ ಕೂಡ ಇರುವುದಿಲ್ಲವೆಂದು ವಿಚಾರದಿಂದ ತಿಳಿದುಬರುತ್ತದೆ. ಇನ್ನು ಸಾಮಾನ್ಯ ಜನರಿಗೆ ಆ ಯೋಗ್ಯತೆಯು ಬರಲು ಸಾಧ್ಯವಿಲ್ಲ.

ವಿವರಣೆ: ಜ್ಞಾನ ಪಡೆಯಲು ಸಮರ್ಥನಾದವನೇ ಜ್ಞಾನಾಧಿಕಾರಿ ಆಗಿರುತ್ತಾನೆ. ಈ ಸಾಮರ್ಥ್ಯ ಅಥವಾ ಯೋಗ್ಯತೆಯು ಇರುವವನ ಲಕ್ಷಣಗಳ ಸಂಪೂರ್ಣ ವಿವರಗಳನ್ನು ಮುಂದಿನ ಅಧ್ಯಾಯದಲ್ಲಿ ತಿಳಿಸಲಾಗಿದೆ. ಆದರೆ ಈ ಓವೀಯಲ್ಲಿ ಜ್ಞಾನಾಧಿಕಾರಿಯ ಈ ಯೋಗ್ಯತೆಯ ಮಹತ್ವವನ್ನು ತಿಳಿಸಲಾಗಿದೆ. ಈ ಯೋಗ್ಯತೆಯು ಬ್ರಹ್ಮಾದಿ ದೇವತೆಗಳಲ್ಲಿಯೂ ಇರುವುದಿಲ್ಲ. ಏಕೆಂದರೆ ಈ ದೇವಾನುದೇವತೆಗಳು ತಾವು ಸಂಪಾದಿಸಿದ ಪುಣ್ಯದ ಹೆಚ್ಚಳದಿಂದ

ತಮ್ಮ ಪದವಿಗಳನ್ನು ಪಡೆದಿರುತ್ತಾರೆ. ಈ ಯೋಗ್ಯತೆಯನ್ನು ಸಂಪಾದಿಸಲು ಇರಬೇಕಾದ ವೈರಾಗ್ಯ, ಮುಮುಕ್ಷುತ್ವಗಳು ಅವರಲ್ಲಿರದೇ ಪರಲೋಕದ ಸುಖಾಕಾಂಕ್ಷಿಗಳಾಗಿರುವ ಇವರಿಗೆ ಈ ಯೋಗ್ಯತೆಯು ದುರ್ಲಭವೇ ಸರಿ. ಹೀಗಿದ್ದಾಗ ಸಾಮಾನ್ಯ ಮನುಷ್ಯರಿಗೆ ಇದು ದಕ್ಕುವುದು ಬಹಳ ಕಷ್ಟಕರವಾಗಿರುತ್ತದೆ.

**ಓವೀ.74 :** ನಾನಾ ಬಗೆಯ ಸಾಧನಗಳಾದ ಜಪ, ತಪ, ಅನುಷ್ಠಾನ, ತೀರ್ಥಯಾತ್ರೆ, ವ್ರತ, ಭೂರಿದಾನ, ಹಠಯೋಗ, ಮುಂತಾದವುಗಳಿಂದಲೂ ಈ ಯೋಗ್ಯತೆಯು ಬರುವಂತಿಲ್ಲ.

**ವಿವರಣೆ :** ಜನರು ತಮ್ಮ ಇಷ್ಟಾರ್ಥ ಪ್ರಾಪ್ತಿಗಾಗಿ ಅನೇಕ ಸಾಧನಗಳ ಮೊರೆ ಹೋಗುತ್ತಾರೆ. ಈ ಸಾಧನಗಳನ್ನು ಅತ್ಯಂತ ಪ್ರಾಮಾಣಿಕವಾಗಿ ಮಾಡಿದರೂ ಕೂಡ ಅವುಗಳಿಂದ ಇಷ್ಟಾರ್ಥ ಪ್ರಾಪ್ತಿಯಾಗಬಹುದೇ ವಿನಃ ಜ್ಞಾನಾಧಿಕಾರದ ಯೋಗ್ಯತೆಯೂ ಲಭಿಸುವುದಿಲ್ಲ. ಏಕೆಂದರೆ ಈ ಯೋಗ್ಯತೆಯು ಲಭಿಸಬೇಕಾದರೆ ಅವುಗಳನ್ನು ಯಾವ ಅಪೇಕ್ಷೆಯೂ ಇಲ್ಲದೇ ನಿಷ್ಕಾಮವಾಗಿ ಮಾಡಬೇಕಾಗುತ್ತದೆ. ಇದು ಕಷ್ಟಕರವಾದ ಸಂಗತಿಯೇ ಆಗಿದೆ. ಒಂದು ವೇಳೆ ಸಾಧ್ಯವಾದರೂ ಅದರಿಂದ ಈ ಒಂದು ಜನ್ಮದಲ್ಲಿ ಚಿತ್ತ ಶುದ್ಧಿಯು ಅಂದರೆ ಜ್ಞಾನಪ್ರಾಪ್ತಿಗಾಗಿ ಯೋಗ್ಯತೆಯು ಬರಲಾರದು. ಅನೇಕ ಜನ್ಮಗಳ ನಿಷ್ಕಾಮಕರ್ಮವು ಬೇಕಾಗುತ್ತದೆ. 'ಜಪ' ವು ಇಂತಹ ಸಾಧನಗಳಲ್ಲಿ ಒಂದು. ಯಾವುದೋ ಒಂದು ಮಂತ್ರವನ್ನು ಆಗಾಗ ಹೇಳುತ್ತಿರುವುದೇ 'ಜಪ' ವು. ಈ ಮಂತ್ರವು ಗುರುವಿನಿಂದ ಉಪದೇಶಿಸಲ್ಪಟ್ಟಿದ್ದರೆ ಹೆಚ್ಚು ಪರಿಣಾಮಕಾರಿ. ನಿತ್ಯ ಕರ್ಮಗಳಲ್ಲಿ ಮತ್ತು ಹೋಮ ಹವನಗಳಲ್ಲಿ 'ಜಪ' ವನ್ನು ಮಾಡುವ ರೂಢಿ ಇದೆ. ಜಪ ಮಾಡಲು ಜಪಮಣಿಯನ್ನು ಬಳಸುತ್ತಾರೆ. ಎಲ್ಲ ರೀತಿಯ ಉಪಾಸನೆಗಳು ಒಂದು ರೀತಿಯ ತಪಸ್ಸು ಆಗಿರುತ್ತದೆ. ಜೀವನ ಪೂರ್ತಿ ಒಂದು ದೇವತೆಯನ್ನು ಒಲಿಸಿಕೊಳ್ಳುವ ಪ್ರಯತ್ನವೇ ತಪಸ್ಸಾಗಿದೆ. ಶಾಸ್ತ್ರದ ಹಾಗೂ ಗುರುವಿನ ಮಾರ್ಗ ದರ್ಶನವು ಇದಕ್ಕೆ ಅವಶ್ಯಕವಾಗಿದೆ. ಧಾರ್ಮಿಕ ಆಚರಣೆಗಳನ್ನು ತಪ್ಪದೇ ಮಾಡುವುದೇ ಅನುಷ್ಠಾನವಾಗಿದೆ. ಕಾಶೀ, ಮಥುರಾ, ಮುಂತಾದ ಧಾರ್ಮಿಕ ಕ್ಷೇತ್ರಗಳಿಗೆ ಹೋಗಿ ಬರುವುದೇ ತೀರ್ಥಯಾತ್ರೆಯಾಗಿದೆ. ಇಷ್ಟಾರ್ಥ ಸಿದ್ಧಿಗಾಗಿ ಗಣಪತಿ, ದೇವಿ, ಮುಂತಾದ ದೇವತೆಗಳ ಪೂಜೆಯನ್ನು ವಿಶಿಷ್ಟ ಕಾಲದಲ್ಲಿ, ವಿಶಿಷ್ಟ ರೀತಿಯಲ್ಲಿ ಶಾಸ್ತ್ರೋಕ್ತವಾಗಿ ಮಾಡುವುದೇ ವ್ರತವಾಗಿರುತ್ತದೆ. ಭೂರಿದಾನವೆಂದರೆ ಹಣ, ವಸ್ತು, ಮುಂತಾದವುಗಳನ್ನು ಹೆಚ್ಚಿನ ಪ್ರಮಾಣದಲ್ಲಿ ದಾನ ಮಾಡುವುದು. ಪ್ರಾಣಾಯಾಮ, ಮುಂತಾದ ಸಾಧನಗಳಿಂದ ಮನಸ್ಸನ್ನು ಬಲಾತ್ಕಾರವಾಗಿ ಮನಸ್ಸನ್ನು ನಿಯಂತ್ರಿಸುವುದು ಹಠಯೋಗವಾಗಿದೆ. ಹಿಂದೆ ತಿಳಿಸಿದಂತೆ ಈ ಸಾಧನಗಳಿಂದ ಜ್ಞಾನ ಪ್ರಾಪ್ತಿಗಾಗಿ ಯೋಗ್ಯತೆಯು ಬರಲಾರದು.

**ಓವೀ.75 :** ಈ ಸಾಧನಗಳನ್ನು ಜ್ಞಾನಾಧಿಕಾರಕ್ಕಾಗಿಯೇ ಮಾಡಲು ಹೇಳಿದೆ. ಆದರೆ ವೇದಗಳು ಈ ಸಾಧನಗಳನ್ನು 'ಭೋಗಕ್ಕಾಗಿ' ಎಂದು ಹೇಳಿರುವುದೂ ಕೂಡ ನಿಜ. ಇದಕ್ಕೆ ಕಾರಣವಿದೆ.

ವಿವರಣೆ : ಹಿಂದೆ ವಿವರಿಸಲ್ಪಟ್ಟ ಸಾಧನ ವೈವಿಧ್ಯಗಳನ್ನು ವೇದವು ಮುಖ್ಯವಾಗಿ ಸಾಧಕರಿಗೆ ಜ್ಞಾನಾಧಿಕಾರವು ಬರುವುದಕ್ಕಾಗಿಯೇ ಹೇಳಿರುತ್ತದೆ. ಏಕೆಂದರೆ ಇದೇ ಸಾಧನಗಳನ್ನು ನಿಷ್ಕಾಮವಾಗಿ ಅಂದರೆ ಯಾವುದೇ ಫಲಾಪೇಕ್ಷೆಗಳಿಲ್ಲದೇ ಮಾಡಿದ್ದೇ ಆದರೆ ಆಗ ಅವು ಚಿತ್ತ ಶುದ್ಧಿಯಲ್ಲಿ ಪರ್ಯವಸಾನವಾಗುತ್ತವೆ. ಅಂದರೆ ಅವುಗಳ ಆಚರಣೆಯಿಂದ ಬರುವ ಪುಣ್ಯಫಲವು ದುರಿತಕ್ಷಯವನ್ನು ( ಪಾಪನಾಶ ) ಮಾಡಿ ಚಿತ್ತ ಶುದ್ಧಿಯನ್ನು ತರುತ್ತವೆ. ಸಾಧಕನಿಗೆ ಚಿತ್ತಶುದ್ಧಿಯಿಲ್ಲದೇ ಜ್ಞಾನಾಧಿಕಾರವು ಲಭಿಸುವಂತಿಲ್ಲ. ಚಿತ್ತಶುದ್ಧಿಯ ಸ್ವರೂಪವನ್ನು ಮುಂದಿನ ಅಧ್ಯಾಯದಲ್ಲಿ ವಿವರವಾಗಿ ತಿಳಿಸಲಾಗಿದೆ. ಆದರೆ ಈ ಸಾಧನಗಳಿಗೆ ಅಂದರೆ ಕರ್ಮೋಪಾಸನೆಗಳಿಗೆ ಪ್ರತ್ಯೇಕವಾಗಿ ಫಲವನ್ನು ಹೇಳಿರುವುದು ನಿಜವಾದರೂ ವೇದವು ಅದನ್ನು ಆರಂಭದಲ್ಲಿ ಸಾಧಕರಿಗೆ ಆಕರ್ಷಣಾರ್ಥವಾಗಿ ಹೇಳಿದೆ. ಮುಂದಿನ ಓವೀಗಳಲ್ಲಿ ಇದರ ವಿವರಗಳನ್ನು ನೋಡುತ್ತೇವೆ.

ಓವೀ.76 : ರೋಗ ಪೀಡಿತ ಮಗುವಿನ ಆರೋಗ್ಯವನ್ನು ಸುಧಾರಿಸಲು ಯಾವುದೇ ತಾಯಿಯು ಕೊಟ್ಟ ಕಹಿ ಔಷಧಿಯನ್ನು ಏನೂ ತಿಳಿಯದ ಮಗುವು ಮೊದಲು ಕುಡಿಯದೇ ನಿರಾಕರಿಸುತ್ತದೆ.

ವಿವರಣೆ : ವೇದಗಳ ಕರ್ಮಕಾಂಡವು ಅತ್ಯಂತ ವಿಸ್ತಾರವಾಗಿರುತ್ತದೆ. ಇದರಲ್ಲಿ ಅನೇಕ ಕರ್ಮಗಳೂ ಹಾಗು ಉಪಾಸನೆಗಳೂ ಹೇಳಲ್ಪಟ್ಟಿವೆ. ಇವುಗಳು ಬ್ರಹ್ಮಾತ್ಮೈಕ್ಯ ಜ್ಞಾನವನ್ನು ನೀಡುವ ಉಪನಿಷತ್ತುಗಳಿಗಿಂತ ಪೂರ್ವದಲ್ಲಿ ಬಂದಿರುವುದರಿಂದ, ಅವುಗಳ ಉದ್ದೇಶವು ಸಾಧಕನಿಗೆ ಉಪನಿಷತ್ತುಗಳ ಜ್ಞಾನವನ್ನು ಪಡೆಯುವ ಸಾಮರ್ಥ್ಯವನ್ನು ಅಥವಾ ಯೋಗ್ಯತೆಯನ್ನು ತಂದುಕೊಡಲಿಕ್ಕಾಗಿಯೇ ಇರುತ್ತವೆ ಎಂದು ಶ್ರೀ ಶಂಕರಾಚಾರ್ಯರು ಹೇಳಿದಂತೆ ಶ್ರೀಗಳೂ ಕೂಡ ಹೇಳುತ್ತಾರೆ. ಆದರೆ ವಿಷಯ ಸುಖವನ್ನೇ ಬಯಸುವ ಸಾಮಾನ್ಯ ಜನರು ಉಪನಿಷತ್ತುಗಳ ಜ್ಞಾನವನ್ನು ಬಯಸುವುದಿಲ್ಲ. ಆದುದರಿಂದ ಕರ್ಮೋಪಾಸನೆಗಳು ತರುವ ಜ್ಞಾನಾಧಿಕಾರವನ್ನೂ ಕೂಡ ತಮಗೆ ಬೇಡವೆನ್ನುತ್ತಾರೆ. ಇಂತಹವರನ್ನು ಏನೂ ತಿಳಿಯದ ಮಗುವಿಗೆ ಈ ಓವೀಯಲ್ಲಿ ಹೋಲಿಸಲಾಗಿದೆ. ಈ ಮಗುವು ರೋಗಸ್ಥವಾದಾಗ ರೋಗ ವಾಸಿಯಾಗಲು ತಾಯಿ ಕೊಟ್ಟ ಕಹಿ ಔಷಧವನ್ನು ಕುಡಿಯಲೊಪ್ಪದೇ ಹಠ ಮಾಡುತ್ತದೆ.

ಓವೀ.77 : ಕಹಿ ಔಷಧವನ್ನು ಕುಡಿಯಲೊಪ್ಪದ ಅಂತಹ, ಏನೂ ತಿಳಿಯದ ಹಠಮಾರಿ ಮಗುವಿಗೆ, ಅದರ ತಾಯಿಯು ಸಿಹಿ ತಿಂಡಿಯ ಆಸೆಯನ್ನು ತೋರಿಸಿದಾಗ ಆ ಮಗುವು ತಾನೇ ಕಹಿ ಔಷಧವನ್ನು ಕುಡಿಯುತ್ತದೆ.

ವಿವರಣೆ : ಈ ಓವೀಯು ಹಿಂದಿನ ಓವೀಯಿಂದ ಮುಂದುವರೆಯುತ್ತದೆ. ಏನೂ ತಿಳಿಯದ ಮಗುವಿಗೆ ತಾನು ರೋಗದಿಂದ ನರಳುತ್ತಿರುವುದು, ಕಹಿ ಔಷಧಿಯನ್ನು ಕುಡಿದಾಗ ಹೋಗುತ್ತದೆ ಎನ್ನುವುದು ಗೊತ್ತಾಗುವುದಿಲ್ಲ. ಆದುದರಿಂದ ಔಷಧಿಯನ್ನು ಕುಡಿಯದೇ ಹಠ ಮಾಡುತ್ತಿರುವಾಗ ತಾಯಿಯು ಮಗುವಿಗೆ ಸಿಹಿ ತಿಂಡಿಯನ್ನು ಕೊಡುವ

ಆಮಿಷವನ್ನು ಒಡ್ಡಬಹುದು. ಸಿಹಿ ತಿಂಡಿಯು ಸಿಗುತ್ತದೆ ಎಂಬ ಆಸೆಗೆ ಮಗುವು ಕಹಿ ಔಷಧಿಯನ್ನು ಕುಡಿಯುತ್ತದೆ. ಇದೇ ರೀತಿ ವೇದವು ಜನರಿಗೆ ಜ್ಞಾನಾಧಿಕಾರವು ಬರಲೆಂದು ಸಾಧನಗಳಿಗೆ ಫಲವು ಸಿಗುತ್ತದೆ ಎಂಬುದನ್ನೂ ತಿಳಿಸಿ, ಜನರು ಸಾಧನೆಗಳನ್ನು ಕೈಕೊಳ್ಳುವಂತೆ ಮಾಡಿರುತ್ತದೆ.

ಓವೀ.78 : ಅದೇ ರೀತಿ ವೇದಗಳು ಜ್ಞಾನಾಧಿಕಾರಕ್ಕಾಗಿಯೇ ಕರ್ಮೋಪಾಸನೆಗಳನ್ನು ವಿಧಿಸುತ್ತವೆ. ಆದರೆ ಬಾಲಬುದ್ಧಿಯ ಸಾಮಾನ್ಯ ಜನರು ಮಾತ್ರ ವಿಷಯ ಸುಖವನ್ನೇ ಇಚ್ಛಿಸುತ್ತಾರೆ.

ವಿವರಣೆ : ಇನ್ನು ಈ ಓವೀಯಿಂದ ಮುಂದೆ, ಹಿಂದೆ ತಿಳಿಸಿದ ಮಗುವಿನ ದೃಷ್ಟಾಂತದಂತೆ, ಮಗುವು ಹೇಗೆ ಕಹಿ ಔಷಧಿಯನ್ನು ಕುಡಿಯಲು ಇಚ್ಛಿಸುವುದಿಲ್ಲವೋ ಹಾಗೆಯೇ ಬಾಲಬುದ್ಧಿಯ ಜನರು ಸಾಧನೆಗಳ ಬಗ್ಗೆ ನಡೆದುಕೊಳ್ಳುತ್ತಾರೆಂದು ತಿಳಿಸಲಾಗಿದೆ. ವೇದಗಳೇನೋ ಕಾರ್ಮೋಪಾಸನೆಗಳಂತಹ ಸಾಧನಗಳನ್ನು ವಿಧಿಸಿದ್ದು ಅವುಗಳ ಉದ್ದೇಶವು ಜ್ಞಾನಾಧಿಕಾರವನ್ನು ಎಲ್ಲರೂ ಪಡೆಯಬೇಕೆಂಬುದೇ ಆಗಿರುತ್ತದೆ. ಆದರೆ ಅಜ್ಞಾನಿ ಜನರು ವಿಷಯ ಸುಖವನ್ನೇ ಸದಾ ಇಚ್ಛಿಸುವವರಾಗಿರುತ್ತಾರೆ. ಮಗುವು ಸದಾ ಹೇಗೆ ಸಿಹಿ ತಿಂಡಿಗಳನ್ನು ಇಚ್ಛಿಸುತ್ತದೆಯೋ ಹಾಗೆ ಇವರ ಸ್ಥಿತಿ ಇರುತ್ತದೆ. ಆದುದರಿಂದ ಈ ಜನರು ಯಾವುದೇ ಆಧ್ಯಾತ್ಮಿಕ ಸಾಧನಗಳನ್ನು ಮಾಡಲು ಇಚ್ಛಿಸುವುದಿಲ್ಲ.

ಓವೀ.79 : ಈ ಸಾಧನೆಗಳನ್ನು ಬಾಲಬುದ್ಧಿಯ ಜನರು ಪ್ರೀತಿಯಿಂದ ಮಾಡುವುದಿಲ್ಲವಾದ್ದರಿಂದ ಅವರಿಗಾಗಿಯೇ ವೇದವು ಈ ಸಾಧನೆಗಳಿಗೆ ಫಲಗಳನ್ನು ಹೇಳಿದೆ. ಹಾಗೆಯೇ ಪ್ರೌಢ ಜನರಿಗೆ ನಿಷ್ಕಾಮವಾದ ಕರ್ಮೋಪಾಸನೆಗಳನ್ನು ಆಚರಿಸಲು ಬೋಧಿಸಲಾಗಿದೆ.

ವಿವರಣೆ : ವಿಚಾರಹೀನರಾದ ಬಾಲಬುದ್ಧಿಯ ಜನರು ಸದಾ ವಿಷಯ ಸುಖವನ್ನೇ ಅಪೇಕ್ಷಿಸುವುದರಿಂದ ಅವರಿಗೆ ವರ್ಣಾಶ್ರಮಯುಕ್ತವಾದ ಕರ್ಮೋಪಾಸನೆಗಳನ್ನು ಮಾಡಲೇಬೇಕೆಂದು ವೇದವು ವಿಧಿಸಿರುತ್ತದೆ. ಆದರೆ ಅವರು ಈ ಸಾಧನಗಳನ್ನು ಕರ್ತವ್ಯದೃಷ್ಟಿಯಿಂದ ಮಾಡುತ್ತಾರೆಯೇ ವಿನಃ ಮನಸಾರೆ ಒಪ್ಪಿ ಪ್ರೀತಿಯಿಂದ ಮಾಡುವುದಿಲ್ಲ. ಆದುದರಿಂದ ಅಂತಹವರಿಗೆ ಈ ಸಾಧನಗಳನ್ನು ಮಾಡಲು ಆಸಕ್ತಿ ಹುಟ್ಟಲೆಂದು ಪ್ರತಿಯೊಂದು ಕರ್ಮೋಪಾಸನೆಗಳಿಗೆ ಇಹ-ಪರಗಳಲ್ಲಿ ಯೋಗ್ಯ ಫಲ ಉಂಟಾಗುತ್ತದೆಂದು ಹೇಳಿರುತ್ತದೆ. ಈ ಫಲಗಳನ್ನು ಭೋಗಿಸುವ ಇಚ್ಛೆಯಿಂದಲಾದರೂ ಈ ಸಾಧನಗಳನ್ನು ಜನರು ಮಾಡುತ್ತಾರೆಂದು ವೇದವು ತಿಳಿಸಿರುತ್ತದೆ. ಮಗುವು ಸಿಹಿತಿಂಡಿಯ ಆಸೆಯಿಂದಲಾದರೂ ಕಹಿ ಔಷಧವನ್ನು ಕುಡಿಯುವಂತಿದೆ ಇದು.

ಓವೀ.80 : ಮಗುವು ದೊಡ್ಡದಾದಾಗ, 'ಕಹಿ ಔಷಧವನ್ನು ತೆಗೆದುಕೊಂಡ ಮೇಲೆ ಸಿಹಿ ತಿಂಡಿಯನ್ನು ತಗೆದುಕೊಳ್ಳುವುದು ಅತ್ಯಂತ ಕೆಟ್ಟದು; ಏಕೆಂದರೆ ಅದರಿಂದ ಅನೇಕ ರೋಗಗಳು ಬಂದು ದುಃಖವನ್ನು ಅನುಭವಿಸಬೇಕಾಗುವುದು' ಎಂದು ತಾಯಿಯು ಹೇಳುವುದರಿಂದ ಮಗುವು ಸಿಹಿತಿಂಡಿಯನ್ನು ಕೇಳುವುದಿಲ್ಲ.

ವಿವರಣೆ : ಮಗುವು ಸ್ವಲ್ಪ ದೊಡ್ಡದಾಗಿ ತಿಳುವಳಿಕೆ ಬಂದ ನಂತರ ಸಿಹಿತಿಂಡಿಯನ್ನು ತಿನ್ನುವುದರಿಂದ ಬೇರೆ ರೋಗಗಳು ಉಂಟಾಗಿ ಜೀವನವಿಡೀ ದುಃಖವನ್ನು ಅನುಭವಿಸಬೇಕಾಗುವುದು ಎಂದು ತಾಯಿಯು ಮಗುವಿಗೆ ತಿಳಿಸಿ ಹೇಳುತ್ತಾಳೆ. ಆಗ ಮಗುವು ಹಠ ಮಾಡುವುದನ್ನು ಬಿಟ್ಟು ಸಿಹಿ ತಿಂಡಿಯನ್ನು ಕೊಡದೇ ಇದ್ದರೂ ಕಹಿ ಔಷಧವನ್ನು ಕುಡಿಯಲು ಅಭ್ಯಾಸ ಮಾಡಿಕೊಳ್ಳುತ್ತದೆ. ಮಗುವನ್ನು ಬಾಲಬುದ್ಧಿಯ ಜನರಿಗೆ ಅನ್ವಯಿಸಿ ಹೇಳುವುದನ್ನು ಮುಂದಿನ ಓವೀಯಲ್ಲಿ ಕಾಣುತ್ತೇವೆ. ಮುಂದಿನ ಓವೀಯ ಪ್ರಥಮ ಚರಣವನ್ನು ಇದೇ ಓವೀಯಲ್ಲಿ ವಿವರಿಸಲಾಗಿದೆ.

ಓವೀ.81 : ಇದೇ ರೀತಿ ನಿಷ್ಕಾಮಕರ್ಮದಿಂದ ಪಾಪವು ನಾಶವಾದಾಗ ಪ್ರೌಢರಿಗೆ ವೇದವು ಸಕಾಮಕರ್ಮಗಳನ್ನು ನಿಂದಿಸಿ ಜ್ಞಾನವನ್ನು ಉಪದೇಶ ಮಾಡುತ್ತದೆ.

ವಿವರಣೆ : ಈ ಓವೀಯ ಪ್ರಥಮ ಚರಣವನ್ನು ಹಿಂದಿನ ಓವೀಯಲ್ಲೇ ವಿವರಿಸಲಾಗಿದೆ. ಬಾಲಬುದ್ಧಿಯ ಜನರು ಕರ್ಮೋಪಾಸನೆಗಳನ್ನು ಮಾಡಬೇಕೆಂದು ಅವುಗಳಿಗೆ ವೇದವು ಫಲವನ್ನೂ ಹೇಳಿರುತ್ತದೆ. ಯಾರಿಗೆ ಈ ಫಲಗಳು ಅನಿತ್ಯವೂ ಹಾಗೂ ದುಃಖದಾಯಕವೂ ಆಗಿರುತ್ತವೆ ಎಂಬ ತಿಳುವಳಿಕೆ ಇದ್ದ ಪ್ರೌಢ ಬುದ್ಧಿಯವರಿಗೆ ವೇದವು ಈ ಫಲಗಳನ್ನು ನಿಂದಿಸಿ ನಿಷ್ಕಾಮಕರ್ಮಗಳನ್ನು ಬೋಧಿಸುತ್ತದೆ. ಈ ಸಾಧನಗಳನ್ನು ಸಕಾಮವಾಗಿ ಆಗಲೀ ಅಥವಾ ನಿಷ್ಕಾಮವಾಗಿಯಾಗಲೀ ಆಚರಿಸಿದಾಗ ಪುಣ್ಯಸಂಚಯ ಉಂಟಾಗಿ ಅದರಿಂದ ಪಾಪನಾಶ ಉಂಟಾಗುತ್ತದೆ. ಅಂದರೆ ಕ್ರಮೇಣ ಚಿತ್ತಶುದ್ಧಿಯು ಉಂಟಾಗುತ್ತದೆ. ಇಂತಹ ಸಾಧಕರಿಗೆ ಸಕಾಮ ಕರ್ಮಗಳನ್ನು ವೇದವು ನಿಂದಿಸಿ ಬ್ರಹ್ಮಾತ್ಮೈಕ್ಯ ಜ್ಞಾನವನ್ನು ಬೋಧಿಸುತ್ತದೆ. ಕರ್ಮ ಮತ್ತು ಜ್ಞಾನಗಳು ಒಟ್ಟಿಗೇ ಹೋಗಲಾರವು. ಏಕೆಂದರೆ ಕರ್ಮವು ಕರ್ತೃತ್ವವನ್ನೂ, ಜ್ಞಾನವು ಆಕರ್ತೃತ್ವವನ್ನೂ ಒಳಗೊಂಡಿರುವುದರಿಂದ ಅವು ಒಂದಕ್ಕೊಂದು ವಿರುದ್ಧವಾಗಿವೆ.

ಓವೀ.82: ಆದುದರಿಂದ ವೇದೋಕ್ತ ಕರ್ಮೋಪಾಸನೆಗಳ ಫಲವು ಕೇವಲ ಜ್ಞಾನಾಧಿಕಾರವನ್ನು ಉಂಟುಮಾಡುವುದಕ್ಕಾಗಿಯೇ ಇರುತ್ತವೆ ಎಂಬುದು ಸ್ಪಷ್ಟವಾಗುತ್ತದೆ.

ವಿವರಣೆ : ಮೊದಲು ವೇದವು ವಿಷಯಾಸಕ್ತ ಬಾಲಬುದ್ಧಿಯ ಜನರಿಗಾಗಿ ಕಾರ್ಮೋಪಾಸನೆಗಳನ್ನು ವರ್ಣಾಶ್ರಮ ಧರ್ಮಕ್ಕನುಸರಿಸಿ ವಿಧಿಸಿ, ಅವುಗಳಿಗೆ ಪ್ರತ್ಯೇಕವಾಗಿ ಫಲವು ಉಂಟಾಗುತ್ತದೆಂದು, ತಿಳಿಸಿರುತ್ತದೆ. ಈ ಜನರು ಸಂತೋಷದಿಂದ ಈ ಸಾಧನಗಳನ್ನು ಮಾಡಿ ಪುಣ್ಯ ಸಂಪಾದಿಸಲೆಂದೇ ಇದರ ಉದ್ದೇಶವು ಇರುತ್ತದೆ. ಈ ಪುಣ್ಯದ

ಸಂಚಯದಿಂದ ಕ್ರಮೇಣ ಪಾಪವು ನಾಶವಾಗಿ ಅವರಿಗೆ ವಿಚಾರ ಶಕ್ತಿಯು ಉಂಟಾಗುತ್ತದೆ. ಇಂತಹ ಪ್ರಬುದ್ಧರಿಗೆ ವೇದವು ಸಕಾಮ ಕರ್ಮಫಲಗಳನ್ನು ನಿಂದಿಸಿ, ನಿಷ್ಕಾಮ ಕರ್ಮಗಳನ್ನು ವಿಧಿಸುತ್ತದೆ. ನಿಷ್ಕಾಮ ಕರ್ಮಗಳ ಆಚರಣೆಯಿಂದ ಸಾಧಕರಿಗೆ ಜ್ಞಾನಾಧಿಕಾರವು ( ಚಿತ್ತ ಶುದ್ಧಿಯು ) ಉಂಟಾಗುತ್ತದೆ. ಆದುದರಿಂದ ಕರ್ಮೋಪಾಸನೆಗಳ ಉದ್ದೇಶವು ಜ್ಞಾನಾಧಿಕಾರವನ್ನು ಪಡೆಯುವುದೇ ಆಗಿರುತ್ತದೆ.

ಈ ಓವೀಯ ಕೊನೆಯ ಎರಡು ಚರಣಗಳನ್ನು ಮುಂದಿನ ಓವೀಯಲ್ಲಿ ಸೇರಿಸಿಕೊಂಡು ವಿವರಿಸಲಾಗಿದೆ.

**ಓವೀ.83 :** ಜ್ಞಾನಾಧಿಕಾರದ ಲಕ್ಷಣಗಳನ್ನು ಈ ಅಧ್ಯಾಯದಲ್ಲಿ ಹೇಳಲು ಬರುವುದಿಲ್ಲ. ಏಕೆಂದರೆ ಈಗಾಗಲೇ ಏಕಾಗ್ರತೆಯಿಂದ ಕೇಳಿ ಆಯಾಸಗೊಂಡಿರುವ ಶ್ರೋತೃಗಳಿಗೆ ಇದು ಮನಸ್ಸಿಗೆ ಮುಟ್ಟಲಿಕ್ಕಿಲ್ಲ. ಅಲ್ಲದೇ ಇದರಿಂದ ಅಧ್ಯಾಯವು ಬಹಳ ದೊಡ್ಡದಾಗುವುದು.

ವಿವರಣೆ : ಹಿಂದಿನ ಓವೀಯ ಕೊನೆಯ ಎರಡು ಚರಣಗಳನ್ನು ಈ ಓವೀಯಲ್ಲಿ ಸೇರಿಸಿಕೊಂಡು ವಿವರಿಸಲಾಗಿದೆ. ಈಗ ಅಧ್ಯಾಯದ ಕೊನೆಯ ಭಾಗಕ್ಕೆ ಬಂದಿದ್ದು ಇದರಲ್ಲಿ ಜ್ಞಾನಾಧಿಕಾರದ ಲಕ್ಷಣಗಳನ್ನು ವಿವರಿಸಲು ಆಗುವಂತಿಲ್ಲ. ಶ್ರೋತೃಗಳು ಈ ಅಧ್ಯಾಯದ ಕೊನೆಯವರೆಗೂ ಏಕಾಗ್ರತೆಯಿಂದ ಕ್ಲಿಷ್ಟವಾದ ವೇದಾಂತ ವಿಚಾರಗಳನ್ನು ಗುರುಮುಖೇನ ಕೇಳಿ ಅರ್ಥಮಾಡಿಕೊಳ್ಳಲು ಪ್ರಯಾಸ ಪಟ್ಟಿರುವುದರಿಂದ ಅವರ ಮನಸ್ಸು ಆಯಾಸಗೊಂಡಿರುವುದರಿಂದಲೂ ಮತ್ತು ಜ್ಞಾನಾಧಿಕಾರದ ಲಕ್ಷಣಗಳನ್ನು ಇದೇ ಅಧ್ಯಾಯದಲ್ಲಿ ಒಂದುವೇಳೆ ಕೊಟ್ಟರೆ ಈ ಅಧ್ಯಾಯವು ಬಹಳ ದೊಡ್ಡದಾಗುವ ಕಾರಣದಿಂದಲೂ, ಜ್ಞಾನಾಧಿಕಾರದ ಲಕ್ಷಣಗಳನ್ನು ಈ ಅಧ್ಯಾಯದಲ್ಲಿ ತಿಳಿಸಿಲ್ಲ.

**ಓವೀ.84 :** ಆದುದರಿಂದ ಜ್ಞಾನಾಧಿಕಾರದ ಲಕ್ಷಣಗಳನ್ನು ಮುಂದಿನ ಎರಡನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ. ಅದನ್ನು ತಿಳಿಯುವುದರಿಂದ ಶ್ರೋತೃಗಳಿಗೆ ಈ ಲಕ್ಷಣಗಳು ಪ್ರಾಪ್ತವಾಗುವ ಲಾಭವು ಉಂಟಾಗುತ್ತವೆ.

ವಿವರಣೆ : ಜ್ಞಾನಾಧಿಕಾರದ ಲಕ್ಷಣಗಳು ಅನೇಕವಿದ್ದು ಅವುಗಳನ್ನು ಒಂದೊಂದೇ ಆಗಿ ಓದುಗರಿಗೆ ಹಾಗೂ ಕೇಳುವವರಿಗೆ ಮನ ಮುಟ್ಟುವಂತೆ ವಿವರಿಸುವ ಅವಶ್ಯಕತೆ ಇರುತ್ತದೆ. ಆದುದರಿಂದ ಈ ವಿಷಯದ ವಿಸ್ತಾರವು ಬಹಳ ದೀರ್ಘವಾಗುವುದರಿಂದ ಈ ವಿಷಯವನ್ನು ಮುಂದಿನ ಎರಡನೆಯ ಅಧ್ಯಾಯದಲ್ಲಿ ವಿವರಿಸಲಾಗುವುದು. ಅಧ್ಯಾತ್ಮ ಸಾಧಕರಾದ ಪ್ರಾಮಾಣಿಕ ಓದುಗರಿಗೆ ಮುಂದಿನ ಅಧ್ಯಾಯವನ್ನು ಅರ್ಥ ಸಹಿತವಾಗಿ ಓದಿ ಮನನ ಮಾಡಿದರೆ ಆಗ ಅದರಲ್ಲಿ ಉಕ್ತವಾದ ಜ್ಞಾನಾಧಿಕಾರದ ಲಕ್ಷಣಗಳು ಆವರಿಗೂ ಪ್ರಾಪ್ತವಾಗುವುದರಲ್ಲಿ ಯಾವುದೇ ಸಂಶಯವೂ ಇರಲಾರದು. ಈ ಅಧಿಕಾರೀ ಲಕ್ಷಣಗಳನ್ನು ಹೊಂದಿದ ಸಾಧಕರು ಕಾಲಕ್ರಮದಲ್ಲಿ ನಿಶ್ಚಯವಾಗಿ ಆತ್ಮಜ್ಞಾನದ ಲಾಭವನ್ನೂ ಕೂಡ ಪಡೆಯುವರು.

**ಓವೀ.85 :** ಈ ಅಧ್ಯಾಯದ ವಿಷಯವು ಗುರುರೂಪ ಸ್ಮರಣವಾಗಿದ್ದು, ಅರ್ಥಸಹಿತವಾಗಿ ಮನನ ಮಾಡುತ್ತಾ ಈ ಅಧ್ಯಾಯವನ್ನು ನಿತ್ಯವೂ ಪಾರಾಯಣ ಮಾಡಬೇಕು.

**ವಿವರಣೆ :** ಈ ಅಧ್ಯಾಯವನ್ನು 'ಮಂಗಳ ಪ್ರತಿಜ್ಞೆ' ಎಂಬ ಹೆಸರಿನಿಂದ ಶ್ರೀಗಳೇ ಕರೆದಿದ್ದಾರೆ. ಮೊದಲನೆಯ ಓವೀಯಲ್ಲಿಯೇ ತಮಗಾದ 'ಆತ್ಮಾನುಭಾವವನ್ನು' ಜ್ಞಾನಾಧಿಕಾರಿಗಳಿಗೆ ತಿಳಿಸಲು ಈ ಪುಸ್ತಕವನ್ನು ಬರೆಯುತ್ತಿದ್ದೇನೆ ಎಂಬ ಪ್ರತಿಜ್ಞೆಯನ್ನು ಮಾಡಿದ್ದಾರೆ. ಇಡೀ ಅಧ್ಯಾಯವು ಈ ಓವೀಯ ಸ್ಪಷ್ಟೀಕರಣವೇ ಆಗಿದೆ. ಈ ಪ್ರತಿಜ್ಞೆಯು ಈಡೇರಲು ಗುರುರೂಪವಾಗಿರುವ ಸದ್ಗುರುವಿನ ಪಾದಗಳಿಗೆ ಮೊದಲು ನಮನವನ್ನು ಮಾಡಿದ್ದಾರೆ. ಜ್ಞಾನಾಧಿಕಾರಿಗಳಿಗೆ ತಮ್ಮ 'ಆತ್ಮಾನುಭವ' ವನ್ನು ಹೇಳುವ ಈ ಪ್ರತಿಜ್ಞೆಯ ವಿವರಣೆಯು ಈ ಅಧ್ಯಾಯದಲ್ಲಿ ಗೌಣವಾಗಿದ್ದು ಇದನ್ನು ನಿಮಿತ್ತ ಮಾಡಿಕೊಂಡು ಗುರುವಿನ ಬಗ್ಗೆಯೇ ಮುಖ್ಯವಾಗಿ ಅಧ್ಯಾಯದಲ್ಲಿ ಬಹಳಷ್ಟು ಹೇಳಿದ್ದಾರೆ. 'ಸದ್ಗುರುವಿನ ಪಾದಗಳಿಗೆ ನಮನ' ಮಾಡುವುದನ್ನು ವಿವರಿಸುತ್ತಾ ಬ್ರಹ್ಮಾತ್ಮೈಕ್ಯ ಜ್ಞಾನವನ್ನೇ ನಮಗೆ ಬೋಧಿಸಿದ್ದಾರೆ. ಆದುದರಿಂದ ಇದು ಅತ್ಯಂತ ಗಹನವಾಗಿದ್ದು ಇದನ್ನು ನಿತ್ಯ ಅರ್ಥಸಹಿತವಾಗಿ ಪಾರಾಯಣ ಮಾಡಬೇಕು. ಗುರುಸ್ಮರಣೆಯೇ ಪ್ರಧಾನವಾಗಿರುವ ಈ ಅಧ್ಯಾಯವನ್ನು ಈ ರೀತಿಯಾಗಿ ನಿತ್ಯವೂ ಪಠಿಸಿದರೆ ಉಂಟಾಗುವ ಫಲದ ಬಗ್ಗೆ ಮುಂದಿನ ಓವೀಯಲ್ಲಿ ತಿಳಿಸಲಾಗಿದೆ.

**ಓವೀ.86 :** ಹೀಗೆ ಯಾರು ಈ ಪ್ರಥಮ ಅಧ್ಯಾಯವನ್ನು ನಿತ್ಯ ಅರ್ಥ ಸಹಿತವಾಗಿ ಪಠಿಸುವರೋ ಅವರು ಪಂಚ ಮಹಾ ಪಾತಕಿಗಳಿದ್ದರೂ ಸದ್ಗುರು ಕೃಪೆಯಿಂದ ಪಾವನರಾಗುತ್ತಾರೆಂಬುದು ನಿಶ್ಚಯವಾಗಿರುತ್ತದೆ. ಇದರಲ್ಲಿ ಸಂಶಯವಿಲ್ಲ.

**ವಿವರಣೆ :** ಗುರು ಸ್ಮರಣೆಯೇ ಪ್ರಧಾನವಾಗಿರುವ ಈ ಅಧ್ಯಾಯವನ್ನು ನಿತ್ಯವೂ ಅರ್ಥ ಸಹಿತವಾಗಿ, ಪ್ರಾಮಾಣಿಕವಾಗಿ ಪರಾಯಣ ಮಾಡಿದ್ದೇ ಆದಲ್ಲಿ ಅಂತಹವರಿಗೆ ನಿಶ್ಚಯವಾಗಿಯೂ ಸದ್ಗುರು ಕೃಪೆಯು ಪ್ರಾಪ್ತಿಯಾಗುವುದು. ಅತ್ಯಂತ ದುರ್ಲಭವಾಗಿರುವ ಈ ಸದ್ಗುರುವಿನ ಕೃಪೆಯಿಂದ ಉಂಟಾಗುವ ಅನಂತ ಪುಣ್ಯರಾಶಿ ಶೇಷದಿಂದ ಪಂಚ ಮಹಾ ಪಾತಕಗಳು ನಿಶ್ಚಯವಾಗಿ ನಾಶವಾಗುವುವು. i) ಬ್ರಹ್ಮಹತ್ಯೆ ( ಬ್ರಾಹ್ಮಣ ಹತ್ಯೆ ); ii) ಸುರಾಪಾನ; iii) ಕಳ್ಳತನ; iv) ಗುರುಪತ್ನೀ ಗಮನ; ಮತ್ತು v) ಈ ನಾಲ್ಕುಪಾತಕಗಳನ್ನೆಸಗಿದವರೊಡನೆ ಸಂಪರ್ಕ – ಇವೇ ಪಂಚ ಮಹಾ ಪಾತಕಗಳು. ಈ ಘೋರ ಪಾಪಗಳೊಡನೆ ಉಳಿದ ಪಾಪಗಳೂ ನಾಶವಾಗಿ ಚಿತ್ತಶುದ್ಧಿ ಉಂಟಾಗಿ ಜ್ಞಾನಾಧಿಕಾರವು ಬರುವುದು.

**ಓವೀ.87 :** ಶ್ರೀ ಪದ್ಮನಾಭ ಯತೀಂದ್ರರು ರಚಿಸಿದ 'ಆತ್ಮಾನುಭವ' ವೆಂಬ ಗ್ರಂಥದಲ್ಲಿ 'ಮಂಗಳ ಪ್ರತಿಜ್ಞೆ' ಎಂಬ ಮೊದಲನೆಯ ಅಧ್ಯಾಯವು ಇಲ್ಲಿಗೆ ಮುಗಿಯಿತು.

**ವಿವರಣೆ :** ಶ್ರೀಗಳು ತಮ್ಮ ಈ ಗ್ರಂಥದಲ್ಲಿ ಪ್ರತಿ ಅಧ್ಯಾಯದ ಕೊನೆಯ ಓವೀಯಲ್ಲಿ ತಮ್ಮ ಹೆಸರು ಶ್ರೀ ಪದ್ಮನಾಭ ಯತೀಂದ್ರರೆಂದೂ ಈ ಗ್ರಂಥದ ಹೆಸರು "ಆತ್ಮಾನುಭವ" ವೆಂದೂ ಹಾಗೂ ಆಯಾ ಅಧ್ಯಾಯದ